ವೈದ್ಯಸಿಂಧು ಪವಿತ್ರ ಗ್ರಂಥಮಾಲಿಕೆ, ನಂ. ೪.

# ಧನ್ವಂತರಿ ಕೀರ್ತನೆ.




ಥೆಯ ರೂಪವಾದ ಶ್ರೀಧನ್ವಂತರಿ ಮಹಾತ್ಮೆಯನ್ನು ದಾಸಕೂಟದ
ಸಾಂಪ್ರದಾಯದಂತೆ ಧನ್ವಂತರಿಅವತಾರ ವಿಷಯವನ್ನು
ವರ್ಣನೆ ಮಾಡುವ ಶ್ರೀಧನ್ವಂತರಿ ಹರಿಕಥೆ.

ಧನ್ವಂತರಿ ಭಕ್ತರಾದ

ಸನಹಳ್ಳಿ ಜಮೀನ್ದಾರ ಕೃಷ್ಣ ಅಯ್ಯಂಗಾರ್ಯರವರಿಂದ

ರಚಿಸಲ್ಪಟ್ಟು

ಂಧು ಸಂಪಾದಕ ವಿ. ಡಿ. ಪಂಡಿತರಿಂದ ಪ್ರಕಟಿಸಲ್ಪಟ್ಟಿತು.





**Copies, 1,000.**

BANGALORE:
PRINTED AT THE CAXTON PRESS.
1920.

Annas.] [ಕ್ರಯ ೬ ಆಣೆ.

**Vaidya Sindhu Series. No. 4.**

ವೈದ್ಯಸಿಂಧು ಗ್ರಂಥಮಾಲಿಕೆ. ನಂ. ೪.

---

# ಶ್ರೀ ಧನ್ವಂತರಿ ಕೀರ್ತನೆ.

---

ಹರಿಕಥೆಯ ರೂಪವಾಗಿ ರಾಗ ರೂಪ ತಾಲಕ್ಕನುಗುಣವಾಗಿ
ಆರೋಗ್ಯದ ಭಗವಂತ ಶ್ರೀ ಧನ್ವಂತರಿ ಅವತಾರ,
ಮಾಹಾತ್ಮ್ಯ, ರೋಗಪರಿಹಾರಕ್ಕೆ ಧ್ಯಾನ, ಭಜನೆ,
ಪೂಜಾದಿಗಳ ವಿಷಯವನ್ನು ದಾಸಕೂಟದ
ಸಾಂಪ್ರದಾಯದಂತೆ ವೈದ್ಯಪಂಡಿತರವರ
ಪ್ರೋತ್ಸಾಹಕ್ಕೂ,
ಶ್ರೀಮನ್ ಮಹಿಸೂರು ಒಡೆಯರವರ ಶ್ರೇಯಃಪ್ರಾರ್ಥನೆಗೂ
ಬಿಸನಹಳ್ಳಿ ಜಹಗೀರ್ದಾರ್ ಕೃಷ್ಣ ಐಯ್ಯಂಗಾರ್ಯ
ರವರಿಂದ ರಚಿಸಲ್ಪಟ್ಟು
ವೈದ್ಯಸಿಂಧು ಸಂಪಾದಕ ವಿ. ಡಿ. ಪಂಡಿತರಿಂದ
ಪ್ರಕಟಿಸಲ್ಪಟ್ಟಿತು.



BANGALORE:
PRINTED AT THE CAXTON PRESS.
1919.

Price. 0—6—0] [ಕ್ರಯ. ೦—೬—೦



## ಸಮರ್ಪಣೆ.

---

ಹರಿಕೀರ್ತನೆ, ಧ್ಯಾನ, ಮುಂತಾದ ಸತ್ಕಾರ್ಯಗಳಲ್ಲಿ ನಿರತರಾದ ಆಸ್ತಿಕ ಮಹಾಜನರ ಸನ್ನಿಧಿಯಲ್ಲಿಯೂ, ಆಯುರ್ವೇದಾಭ್ಯಾಸ ಮಾಡಿ, ಜನರ ಆರೋಗ್ಯರಕ್ಷಣೆ ಮಾಡುವ ವೈದ್ಯರ ಸನ್ನಿಧಿಯಲ್ಲಿಯೂ, ಭಗವದಂಶ ಸಂಭೂತನಾದ ಶ್ರೀ ಧನ್ವಂತರಿಯ ಈ ಕೀರ್ತನೆಗಳು ಕಾಣಿಕೆಯಾಗಿ ಸಮರ್ಪಿಸಲ್ಪಟ್ಟವೆ.

ವಿಧೇಯರಾದ ಗ್ರಂಥಕರ್ತರು ಮತ್ತು ಪ್ರಕಾಶಕರು.

# ಶ್ರೀ ಧನ್ವಂತರಿ ಹರಿಕಥಾ ಮಾಲಿಕೆ.

ಶ್ರೀ ಧನ್ವಂತರಯೇನಮಃ.

## ಪೀಠಿಕೆ.

ಮೈಸೂರು ಸಂಸ್ಥಾನವು ಶಾಸ್ತ್ರಾಭಿವೃದ್ಧಿಯಲ್ಲಿಯೂ, ವಿದ್ಯಾಭಿವೃದ್ಧಿಯಲ್ಲಿಯೂ, ಪ್ರಜೆಗಳ ಸಂಪದಭಿವೃದ್ಧಿಯಲ್ಲಿಯೂ, ಕರ್ಣಾಟಕ ಭಾಷಾಭಿವೃದ್ಧಿಯಲ್ಲಿಯೂ, ಕರ್ಣಾಟಕಮಂಡಲದಲ್ಲಿ ಅಗ್ರಗಣ್ಯವಾಗಿರುವದಲ್ಲದೆ ಭರತಖಂಡದಲ್ಲೆಲ್ಲ ಆಸೇತು ಹಿಮಾಚಲ ಪರ್ಯಂತ ಇರುವ ಭರತಮಂಡಳಿಗಳನ್ನು ವಿಾರಿಸುವದಾಗಿರುತ್ತದೆ. ಆದುದರಿಂದ ಆಯುರ್ವೇದದ ಅಧಿದೇವತೆಯಾದ ಶ್ರೀ ಧನ್ವಂತರಿಯನ್ನು ನಮಸ್ಕರಿಸಿ, ನಮ್ಮನ್ನಾಳುವ ಶ್ರೀಮತ್ಕೃಷ್ಣರಾಜ ಒಡೆಯರ್ ಬಹದ್ದೂರ್ ಜಿ. ಸಿ. ಎಸ್. ಐ., ಮಹಾರಾಜರವರಿಗೂ, ರಾಜಕುಟುಂಬದವರಿಗೂ, ಮಹಾಪ್ರಭುಗಳ ಸಂರಕ್ಷಣೆಯಲ್ಲಿರುವ ಪ್ರಜೆಗಳ ಶ್ರೇಯೋಭಿವೃದ್ಧಿಗೂ, ಮತ್ತು ಆಯುರ್ವೇದ ವೈದ್ಯ (ಕರ್ಣಾಟಕ ವೈದ್ಯ) ವಿದ್ಯೆಗೂ ಮೈಸೂರು ಕರ್ಣಾಟಕ ಸಿಂಹಾಸನವು ತೌರುಮನೆ ಆಗಿಧೆ. ಆದರೆ ಬ್ರಿಟಿಷ್ ಸಾರ್ವಭೌಮರ ಸಾಮ್ರಾಜ್ಯದಲ್ಲಿ ಇಂಗ್ಲಿಷ್ ವೈದ್ಯಶಾಸ್ತ್ರವು ಪ್ರಕಾಶವಾಗಹತ್ತಿದ ಹಾಗೆಲ್ಲ ಭರತಖಂಡದಲ್ಲಿನ ಆಯುರ್ವೇದ ವೈದ್ಯಶಾಸ್ತ್ರವು ಕ್ಷೀಣಗತಿಗೆ ಬಂದಂತೆ ಮೈಸೂರು ಸಂಸ್ಥಾನದಲ್ಲಿಯೂ ಆಯುರ್ವೇದ ವೈದ್ಯವು ಕ್ಷೀಣವಾಗಿದೆ. ಮೊದಲನೇ ಪ್ಲೇಗ್ ಗಲಾಟೆ ಕಾಲದಲ್ಲಿ ಅಂದರೆ ತಾ|| ೫ ನವೆಂಬರ್ ೧೮೯೮ನೆಯ ಇಸ್ವಿಯಲ್ಲಿ ಬೊಂಬಾಯಿ ಸೀಮೆಯ ವೈದ್ಯವಿಶಾರದರಾದ ವೈದ್ಯಪಂಚಾನನ ಮ|| ರಾ|| ವಿ. ಡಿ. ಪಂಡಿತರು ಈ ಬೆಂಗಳೂರು ಪಟ್ಟಣಕ್ಕೆ ಪ್ಲೇಗ್ ಡಾಕ್ಟರ್ ಕೆಲಸಕ್ಕೆ ಬಂದಾಗ್ಗೆ ಬೆಂಗಳೂರು ಪಟ್ಟಣದ ಮಹಾಜನರು ಚಿಕ್ಕಪೇಟೆಯಲ್ಲಿ ಕರ್ಣಾಟಕ

ವೈದ್ಯಶಾಲೆಯನ್ನು ಸ್ಥಾಪಿಸಬೇಕೆಂದು ಸಲಹೆಯನ್ನು ಕೊಟ್ಟರು. ಇವರುಗಳ ಸಹಾಯದೊಂದಿಗೆ ಮೇಲೆ ಬರೆದ ವೈದ್ಯಶಾಲೆಯನ್ನು ಅವರ ವೈದ್ಯಕಾರ್ಖಾನೆಯೊಂದಿಗೆ ಸೇರಿಸಿ, ಇವರು ರೋಗಪೀಡಿತರಾದ ಸ್ನೇಹಿತರನ್ನೂ ಮತ್ತು ಆಯುರ್ವೇದ ವೈದ್ಯ ವಿಷಯವನ್ನೂ ಅಭಿವೃದ್ಧಿಗೆ ತಂದಿರುತ್ತಾರೆ. ಮತ್ತು ೧೫ ವರ್ಷಗಳಿಂದ ವೈದ್ಯಸಿಂಧುವೆಂಬ ಮಾಸಪತ್ರಿಕೆಯನ್ನು ಮಹಾಜನರ ಸಹಾಯದಿಂದ ನಡಿಸುತ್ತಾ ಬಂದು ಇದರಲ್ಲಿ ಹಲವು ಉಪಯುಕ್ತ ವೈದ್ಯ ಗ್ರಂಥಗಳನ್ನು ಪ್ರಕಟಿಸಿದ್ದಾರೆ. ಅವುಗಳಲ್ಲಿ ನೂತನವಾಗಿಯೂ, ಅಗಾಧವಾಗಿಯೂ, ಅವಶ್ಯಕವಾಗಿಯೂ, ಬೇಕಾಗಿದ್ದ ಆಯುರಾರೋಗ್ಯ ವಿಷಯದ ಅಧಿ ದೇವತೆಯಾದ ಶ್ರೀ .ಧನ್ವಂತರಿ ವ್ರತಕಲ್ಪ, ಪೂಜೆ, ಕಥೆ, ಭಜನೆ, ಮುಂತಾದ್ದನ್ನು ಸಂಪೂರ್ಣವಾಗಿ ಕರ್ನಾಟಕ ಸಾಹಿತ್ಯಕ್ಕೆ ಸೇರಿಸಿದ್ದಕ್ಕಾಗಿ ಆನಂದವನ್ನು ತಡೆಯದೆ ರಭಸದಿಂದ ಮಂದಮತಿಯಾಗಿ ಕನ್ನಡ ಮಾತೃ ಭಾಷೆಯ ಸೇವಕನಾದ ವಾಗಟ ಅಗ್ರಹಾರಕ್ಕೆ ಸೇರಿದ ಬಿಸನಹಳ್ಳಿ ಸ್ಕೂಲ್ ಮಾಸ್ಟರ್ ಮತ್ತು ಜಮೀನ್ದಾರ್ ಕೃಷ್ಣ ಅಯ್ಯಂಗಾರ್ಯನಾದ ನಾನು ಧನ್ವಂತರಿ ನಾರಾಯಣಸನ್ನಿಧಿಯಲ್ಲಿ ಭಕ್ತಿಯಿಂದ ಮೈಸೂರು ಸಂಸ್ಥಾನದ ಕರ್ನಾಟಕ ಭಾಷಾಮಂಡಲದ ಪರವಾಗಿ ಆಯುರ್ವೇದ ವೈದ್ಯಾಭಿವೃದ್ಧಿಗೋಸ್ಕರ, ರಾಜಭಕ್ತಿಯುಳ್ಳವನಾಗಿ ವೈದ್ಯಪಂಡಿತರ ಆಶ್ರಯದಿಂದ ವಿಶೇಷ ಶಾಸ್ತ್ರಾರ್ಥವನ್ನು ತಿಳಿಯದವನಾಗಿದ್ದರೂ ಶ್ರೀಧನ್ವಂತರಿ ಜ್ಞಾನಭಕ್ತಿಯಲ್ಲಿ ನಿರತನಾಗಿ ಶ್ರೀ ಧನ್ವಂತರಿ ವ್ರತಕಲ್ಪನಿರ್ಮಾಣಾದರದಿಂದ ಸಂಪೂರ್ಣ ಮಮತೆಯೊಂದಿಗೆ ದೇವಭಕ್ತರಾದವರ ಭಜನೆ, ಹರಿಕಥೆ ಇವರುಗಳ ರಂಜನಾರ್ಥವಾಗಿ ವೈದ್ಯಪಂಚಾನನ ವಿ. ಡಿ. ಪಂಡಿತರಿಗೆ ಶ್ರೀ ಧನ್ವಂತರಿ ಸ್ವಾಮಿಯು ಆಯುರಾರೋಗ್ಯಭಾಗ್ಯವನ್ನು ಸಂಪೂರ್ಣವಾಗಿ ಕೊಡಬೇಕೆಂತಲೂ, ಮತ್ತು ನಮ್ಮನ್ನಾಳುವ ಶ್ರೀಮನ್ಮಹಾರಾಜಾ ಸರ್ಕಾರದವರೂ, ಕರ್ನಾಟಕಭಾಷಾಭಿಮಾನಿಗಳೂ, ಇವರಿಂದ ರಚಿತವಾದ ವೈದ್ಯಗ್ರಂಥಗಳನ್ನು ಆದರದಿಂದ ಗ್ರಹಿಸಿ ವಿ. ಡಿ. ಪಂಡಿತರವರಿಗೆ ಇನ್ನೂ ಅಪೂರ್ವವಾದ ಹೊಸಶೋಧನೆಯ ಬುದ್ಧಿ ಚತುರತೆಯನ್ನು ಶ್ರೀ ಧನ್ವಂತರಿ ಸ್ವಾಮಿಯುಕೊಡಲೆಂತಲೂ, ಈ ಚಿಕ್ಕ ಗ್ರಂಥದ ಅವತಾರಿಕೆಯೊಂದಿಗೆ ಶ್ರೀ ಧನ್ವಂತರೀ ಹರಿಕಥೆ ಎಂಬುವ ಮಾಹಾತ್ಮ್ಯವನ್ನು ಕರ್ನಾಟಕ ಸಂಗೀತ, ರಾಗ, ಮಟ್ಟು ಮುಂತಾದವುಗಳಿಂದ ತಕ್ಕಮಟ್ಟಿಗೆ ಬರೆದು ಕಥಾವಳಿಯ

ರತ್ನಮಾಲೆಯನ್ನು ಕನ್ನಡಿಗರ ಪರವಾಗಿ ರಾಜಾಧಿರಾಜರ ಮರ್ಯಾದೆಗಿಂತ ಲೂ ಶ್ರೇಷ್ಠಮರ್ಯಾದೆಯಾದ ಕರ್ಣಾಟಕ ಧನ್ವಂತರಿ ಎಂಬುವ ಬಿರುದ ನ್ನೂ ವೈದ್ಯಸಿಂಧುವಿನಲ್ಲಿ ಅಚ್ಚು ಹಾಕುವದಕ್ಕಾಗಿ ವೈದ್ಯಸಿಂಧು ಗ್ರಂಥಮಾ ಲೆಗೆ ರಚನೆ ಮಾಡಿರುವದನ್ನು ಪಂಡಿತರಾದವರು ಪರಾಂಬರಿಸಿ ಎರಡನೆ ಸಂಚಿಕೆಗೆ ಬೇಕಾದ ಗ್ರಂಥವಿಚಾರದ ತಿಳುವಳಿಕೆಯನ್ನು ವೈದ್ಯಸಿಂಧು ಆಫೀ ಸಿಗೆ ಬರೆದು ತಿಳಿಸಿ ನನ್ನನ್ನು ಕೃತಾರ್ಥನನ್ನಾಗಿ ಮಾಡಬೇಕು. ನಮ್ಮ ಕನ್ನ ಡಿಗರು ಗ್ರಂಥಾದಿಗಳಿಗೆ ಮಾಡುವ ಅರ್ಥಿಕ ಸಹಾಯವನ್ನರಿತು ಈ ಗ್ರಂಥ ದ ಹಕ್ಕು ಬಾಧ್ಯತೆಯೆಲ್ಲವನ್ನೂ ಕರ್ಣಾಟಕ ಧನ್ವಂತರೀ ಸೇವಾರ್ಪಣ ಮಸ್ತು ಎಂದು ಒಪ್ಪಿಸಿದ್ದೇನೆ. ಹೊಸ ಪ್ರಯತ್ನವಾದದ್ದರಿಂದ ಇದರಲ್ಲಿನ ದೋಷಾದಿಗಳನ್ನು ವಿದ್ವಾಂಸರು ಮನ್ನಿಸಬೇಕು. ನಾಗರಿಲಿಪಿ,(ಬಾಳಬಂಧ ದಲ್ಲಿ) ಯಲ್ಲಿ ಶ್ರೀ ಸತ್ಯ ಧನ್ವಂತರಿ ವ್ರತಕಲ್ಪವನ್ನು ಈ ಪಂಡಿತರವರು ಆಯುರ್ವೇದ ವೈದ್ಯಸಂಘಕ್ಕಾಗಿ ಧಾರೆ ಹೊಯಿದದ್ದರಿಂದ ಅಖಿಲ ಭಾರ ತೀಯ ಆಯುರ್ವೇದ ಮಹಾಸಭೆಯ ಸಭಿಕರು ಇದನ್ನು ಹಿಂದೀಭಾಷಾ ಸಾಹಿತ್ಯಕ್ಕೆ ಪರಿವರ್ತನೆಗಾಗಿಪ್ರಸಿದ್ಧ ಮಾಡಿರುವರು. ಈ ಗ್ರಂಥಪ್ರಚಾರ ಕನಾದ ಕೃಷ್ಣ ಅಯ್ಯಂಗಾರ್ಯನು ಆನಂದದಿಂದ ಈ ಪ್ರಸ್ತಾವನೆಯ ವಿಜ್ಞಾ ಪನೆಯನ್ನು ಕನ್ನಡ ಓದತಕ್ಕ ಮಹನೀಯರ ಪರಾಂಬರಿಕೆಗೆ ತರಬೇ ಕೆಂದು ಪ್ರಾರ್ಥಿಸುತ್ತಾನೆ.

ಬೆಂಗಳೂರು.
22—11—16
ಕಾರ್ತಿಕ ಬ. ದ್ವಾ. ನಲ ಸಂ.

ಕರ್ಣಾಟಕ ವೈದ್ಯಾಭಿಮಾನಿ.

ಶ್ರೀ

    

# ಶ್ರೀ ಧನ್ವಂತರಿ ಕೀರ್ತನೆ.

---o---

(ರಮಾರಮಣಗೋವಿಂದ)

ಶ್ಲೋಕ|| ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಂ | ಪ್ರಸನ್ನವದನಂಧ್ಯಾಯೇತ್ಸರ್ವವಿಘ್ನೋಪಶಾಂತಯೇ ||೧|| ಯಸ್ಯದ್ವಿರದವಕ್ತ್ರಾದ್ಯಾಪಾರಿಷಾದ್ಯಾಃಪರಶ್ಶತಂ | ವಿಘ್ನಂನಿಘ್ನಂತಿಸತತಂ ವಿಷ್ವಕ್ಸೇನಂತಮಾಶ್ರಯೇ ||೨||

(ರಾಗ—ಮೊದಲೊಂದಿಪೆನಿನಗೆ ಗಣನಾಥ ಎಂಬಂತೆ)

ನಾಂ ಭಜಿಸುವೆ ವಿಷ್ವಕ್ಸೇನನಾ ||ಪ|| ಸದಾ ತ್ರಿಜಗವ ಪೊರೆಯುವ ದೇವನಾ ||ಅ|| ಪಾರಮಾರ್ಥಿಕದಿ ಭಜಿಸುವ ಸುಜನರ | ಕೋರಿಕೆಗಳನಿತ್ತು ಕಾವನಾ ||೧|| ಮುಂದುಕಥೆಗೆಯಾವ ತೊಂದರೆಬಾರದೆ | ಚಂದದಿಪಾಲಿಸಲೀದಿನಾ ||೨|| ಕಾಮಿತಾರ್ಥಗಳ | ಪ್ರೇಮದೊಳೊದಗಿಪ | ಶ್ರೀಮದ್ಯೋಗಪುರೀಶನಾ ||೩||

(ಗುರುಪರಂಪರೇ)

ಶ್ಲೋ|| ಶ್ರೀಶೈಲೇಶದಯಾಪಾತ್ರಂ ಧೀಭಕ್ತ್ಯಾದಿಗುಣಾರ್ಣವಂ ಯತೀಂದ್ರಪ್ರವಣಂ ವಂದೇ ರಮ್ಯಜಾಮಾತರಂ ಮುನಿಂ || ಲಕ್ಷ್ಮೀನಾಥಸಮಾರಂಭಾಂ | ನಾಥಯಾಮುನಮಧ್ಯಮಾಂ | ಅಸ್ಮದಾಚಾರ್ಯಪರ್ಯಂತಾಂ ವಂದೇ ಗುರುಪರಂಪರಾಂ || ಯೋನಿತ್ಯಮಚ್ಯುತಪದಾಂಬುಜ ಯುಗ್ಮರುಕ್ಮವ್ಯಾಮೋಹ ತಸ್ತದಿತರಾಣಿತೃಣಾಯಮೇನೇ | ಅಸ್ಮದ್ಗುರೋರ್ಭಗವತೋಸ್ಯದಯೈಕಸಿಂಧೋಃ ರಾಮಾನುಜಸ್ಯಚರಣೌ ಶರಣಂ ಪ್ರಪದ್ಯೇ ||

(ರಾಗ—ಭಾಸುರಿ ಭಜಾವೆ ನಂದಲಾಲಾ ಎಂಬಂತೆ)

ಗುರುಗಳಮನದಿಕೊಂಡಾಡುವೆ ನಿಜ । ಗುರುಗಳಮನದಿಕೊಂಡಾಡುವೆ ॥ಪ॥ ಬಲು ಹರುಷದಿಂದ ಸ್ತುತಿಮಾಡುವೆ ॥ಅ॥ ಗುರುಗಳ ಶುಭಕರ ಚರಣಕಮಲಗಳಿಗೆರಗಿ ಸ್ತೋತ್ರವನುಮಾಡುವೆ ॥ ನಿಜ ॥ ೧ ॥ ಪಾಮರರನುಪರಿಪಾಲಿಸಲುದಿಸಿದ ರಾಮಾನುಜರನುಪಾಡುವೇ ॥೨॥ ಪತಿತರನೇಕರ ಪಾವನಗೊಳಿಸಿದ ಯತಿರಾಜರ ಸ್ತುತಿಮಾಡುವೆ ॥ ೩ ॥ ಕರುಣದಿಂದಭವ ದುರಿತಕೋಟಲೆಯ ಪರಿಹರಿಸೆನ್ನುತಬೇಡುವೆ ॥ ೪ ॥ ಅಷ್ಟಾಕ್ಷರಿಯುಪದೇಶ ವಿತ್ತಯತಿ ಶ್ರೇಷ್ಠರಭಜನೆಯಮಾಡುವೆ ॥ ನಿಜ ॥ ೫ ॥ ನಮೋರಾಮಾನುಜ ಯತಿವರೇಣ್ಯಸದ್ಗುರುಂ । ಯತೀವರ ॥

॥ ಕಂದ ॥

ಘನವಿದ್ವಾಂಸರುತಾಮುರೆ । ಕನಿಕರದಿಂ ಗಿಳಿಯುಸಾಕಿ ಕಲಿಸಿದನುಡಿಯಂ । ಮನವೊಲಿದುಕೇಳ್ವಪರಿಯೊಳ್ । ವಿನುತಿಸಿ ನಾಂ ಪೇಳ್ವ ಹರಿಯ ಕಥೆ ಲಾಲಿಪುದೈ ॥

ವಚನ॥ ಬುದ್ಧಿವಂತರಾದವರು ತಾವು ಸಾಕಿದಗಿಣಿಗೆ ಮಾತುಗಳನ್ನು ಕಲಿಸಿಕೊಟ್ಟು ಆ ಗಿಣಿಯಿಂದ ತೊದಲು ನುಡಿಗಳನ್ನು ಕೇಳಿ ಸಂತಸಪ್ಪೊಂದುವಂತೆ ಇಲ್ಲಿ ನೆರೆದಿರುವ ಮಹನೀಯರಿಗೆ ನಾನು ಪೇಳುವ ಹರಿಕಥೆಯು ಸಂತೋಷವನ್ನುಂಟುಮಾಡಲಿಯೆಂದು ಬೇಡುವೆನು.

(ತೊಹರಾ)

ವಂದಿಸುವೆನು ಶ್ರೀವಾಸುದೇವನಿಗೆ ವಂದಿಸುವೆನು ಸದ್ವಿಪ್ರರಿಗೆ॥ ಚಂಚದಿಂದಲೀ ಸಾಷ್ಟಾಂಗನಮಸ್ಕಾರಗೈವೆ ಹರಿದಾಸರಿಗೆ ॥೧॥

ವಚನ ॥ ಆದರೆ ಈ ಸಭೆಯವರಿಗೆ ಒಂದು ಸಂದೇಹವುಂಟಾಗಿರಬಹುದಲ್ಲವೇ, ಏನಂದರೆ—ಬ್ರಹ್ಮ, ವಿಷ್ಣು, ಈಶ್ವರರೆಂಬ ತ್ರಿಮೂರ್ತಿಗಳಿರುವಲ್ಲಿ ಮುಂದಾಗಿ ವಾಸುದೇವನಿಗೆ ನಮಸ್ಕಾರಗೈಯಲು ಕಾರಣವೇನೆಂಬುದು. ಆದರೆ, ಇದಕ್ಕೆ ಪರಿಹಾರವೇನು ?

ಶ್ಲೋ॥ ವ್ಯಾಸಾಯ ವಿಷ್ಣುರೂಪಾಯ ವ್ಯಾಸರೂಪಾಯ ವಿಷ್ಣವೇ ಎಂಬದಾಗಿಯೂ, ವ್ಯಾಸೋನಾರಾಯಣೋಹರಿಃ ಎಂಬದಾಗಿಯೂ, ವಿಷ್ಣುಸ್ವರೂಪರಾದ ವೇದವ್ಯಾಸರು ಶ್ಲೋ॥ ವಾಸನಾದ್ವಾಸುದೇವಸ್ಯ ವಾಸಿತಂತೇ

ಜಗತ್ತ್ರಯಂ। ಸರ್ವಭೂತನಿವಾಸೋಽಸಿ ವಾಸುದೇವ ನಮೋಽಸ್ತುತೇ ॥ ಎಂಬದಾಗಿ ಹೇಳಿರುತ್ತಾರೆ. ಸರ್ವಭೂತಾಂತರಾತ್ಮನಾದ ಶ್ರೀವಾಸುದೇವನಿಗೆ ನಮಸ್ಕರಿಸುವೆನು. ಆದರೆ ಇಲ್ಲಿ ಕೆಲವರು ನಮ್ಮ ದೇವರು ವಿಷ್ಣುವು, ನಮ್ಮ ದೇವರು ಶಿವನು, ನಮ್ಮ ದೇವರು ಬ್ರಹ್ಮನು, ನಮ್ಮ ದೇವರು ವಿಶ್ವಕರ್ಮನು ಎಂಬದಾಗಿ ಅನೇಕ ವಿಧದಿಂದ ಅನೇಕ ದೇವರುಗಳೆಂದು ಹೇಳುವರು. ಅದು ಸರಿಯಾಗಿರಲಾರದು. ದೇವರು ಒಬ್ಬನಲ್ಲದೆ ಅನೇಕರಿಲ್ಲ. ಹೇಗೆಂದರೆ, ಶ್ಲೋ॥ ಮೃತ್ಪಿಂಡಮೇಕಂ ಬಹುಭಾಂಡರೂಪಂ। ಸುವರ್ಣಮೇಕಂ ಬಹುಭೂಷಣಾನಿ। ಗೋಕ್ಷೀರಮೇಕಂ ಬಹುಧೇನುಜಾತಂ। ಏಕಃಪರಾತ್ಮಾ ಬಹುದೇಹವರ್ತೀ॥ ವಚನ॥ ಅನೇಕವಿಧವಾದ ಭಾಂಡಗಳ ಮಣ್ಣು ಒಂದೇ ಅಲ್ಲವೆ! ಅನೇಕ ಆಭರಣಂಗಳಾಗಿರುವ ಚಿನ್ನವು ಒಂದೇ ಅಲ್ಲವೆ! ನಾನಾವಿಧವಾದ ಬಣ್ಣಗಳುಳ್ಳ ಪಶುಗಳ ಹಾಲು ಒಂದೇ ಅಲ್ಲವೆ! ಅದರಂತೆ ಸರ್ವಭೂತಗಳಲ್ಲಿಯೂ ವಾಸವಾಗಿರುವ ಪರಮಾತ್ಮನು ಒಬ್ಬನೇ ಹೊರತು ಅನೇಕರಿಲ್ಲ. ಆ ದೇವರಿಗೆ ಅನೇಕ ನಾಮಗಳುಂಟು. ಒಂದೊಂದು ಬಗೆಯ ಜನರು ಒಂದೊಂದು ನಾಮವನ್ನು ಧ್ಯಾನಿಸುವರು. ವಿಷ್ಣುಸಹಸ್ರನಾಮವನ್ನು ಪಠನೆಮಾಡುವವರು ಯೋಚಿಸಿನೋಡಿದರೆ,

ಶ್ಲೋ॥ ಈಶ್ವರೋವಿಕ್ರಮೀಧನ್ವೀ, ಯೆಂದುನೂ, ರುದ್ರೋಬಹುಶಿರೋಬಭ್ರುರ್ವಿಶ್ವಯೋನಿಶ್ಶುಚಿಶ್ರವಾಃ। ಸರ್ವಶ್ಶರ್ವಶ್ಶಿವಸ್ಥಾಣುಃ ಎಂಬದಾಗಿಯೂ, ಮತ್ತು ವಿಶ್ವಕರ್ಮಾಮನುಸ್ತ್ವಷ್ಟಾಸ್ಥವಿಷ್ಠಸ್ಥವಿರೋಧ್ರುವಃ। ಎಂಬದಾಗಿಯೂ ಹೇಳಿರಲಿಲ್ಲವೆ! ಇದಲ್ಲದೆ ಲಕ್ಷ್ಮೀಅಷ್ಟೋತ್ತರದಲ್ಲಿ "ನವದುರ್ಗಾಂ ಮಹಾಕಾಳೀಂ ಬ್ರಹ್ಮವಿಷ್ಣು ಶಿವಾತ್ಮಿಕಾಂ" ಎಂದು ಹೇಳಿರುವದಲ್ಲವೇ! ಮತ್ತು ಭಾಗವತದಲ್ಲಿ ಶ್ಲೋ॥ ಹಂಸಾಯ ಸತ್ವನಿಲಯಾಯ ಸವಾಶ್ರಯಾಯ। ನಾರಾಯಣಾಯ ನಿಖಿಲಾಯ ನಿರಾಶ್ರಯಾಯ। ಸತ್ಸಂಗ್ರಹಾಯ ಸಗುಣಾಯ ನಿರೀಶ್ವರಾಯ ಸಂಪೂರ್ಣಪುಣ್ಯಪತಯೇ ಹರಯೇನಮಸ್ತೇ॥ ಎಂಬದಾಗಿ ಹೇಳಿರುವುದು. ಅನೇಕ ಗ್ರಂಥಗಳಲ್ಲಿ ವಿಷ್ಣುವಿಗೆ ಅನೇಕ ನಾಮಗಳಿರುವುದು ತಿಳಿದಿರುವುದು. ಮತ್ತು ಅದ್ವೈತರಾದ ವಚನವು:-"ಹರಿಯುಂ ಶಿವನುಂ ಒನ್ನೇ ಅರಿಯಾದವರ್ಕೆ ವಾಯಿಲೆಮಣ್" ಎಂದಿರುವುದು. ಇನ್ನೂ ಅನೇಕ ಆತ್ಮಜ್ಞಾನಿಗಳು ತಮ್ಮಲ್ಲಿ ಕಾಣುವಂತಹ ಭಗವಂತನು ಒಬ್ಬನೇ

ಆದಕಾರಣ ನಾವು ವಿಷ್ಣುಭಕ್ತರೆಂದು ಶಿವನನ್ನು ದೂಷಣೆ ಮಾಡುವಂಥವರೂ, ನಾವು ಶಿವಭಕ್ತರೆಂದು ವಿಷ್ಣುವನ್ನು ದೂಷಿಸುವಂಥವರೂ ಮಹಾ ಪಾಪಿಷ್ಠರಾಗಿ ರೌರವಾದಿ ನರಕಂಗಳನ್ನು ಅನುಭವಿಸುವರು. ಅವರೇ ಪಾಷಂಡಿಗಳು ಅಂಥವರನ್ನು ದರ್ಶನಮಾಡಿದ್ದಾದರೆ ತಕ್ಷಣ ಸಚೇಲ ಸ್ನಾನವನ್ನು ಮಾಡಬೇಕು. ಅನೇಕ ವಿಧವಾದ ಎಣ್ಣೆಗಳಿಂದ ದೀಪವನ್ನುರಿಸಿದರೂ ಬೆಳಕು ಒಂದಾಗಿರುವಂತೆ (ಸರ್ವಭೂತನಿವಾಸೋಽಸಿ ವಾಸುದೇವನಮೋಸ್ತುತೆ) ಸಮಸ್ತ ಚರಾಚರವಸ್ತುಗಳಲ್ಲಿ ವ್ಯಾಪಿಸಿರುವ ಸ್ವಾಮಿ ಒಬ್ಬನೇ ಆದ್ದರಿಂದಲೇ "ಸರ್ವಂವಿಷ್ಣುಮಯಂಜಗತ್" ಎಂದು ಹೇಳಿರುವುದು. ಯಾರ್‍ಯಾರು ಯಾವ್ಯಾವ ರೂಪಗಳನ್ನು ಯಾವ್ಯಾವ ನಾಮದಿಂದ ಸನ್ನುತಿಸಿ ಪೂಜಿಸುವರೋ ಅವರಿಗೆ ನಾನು ಆಯಾ ರೂಪಗಳಲ್ಲಿ ಅವರವರ ಪೂಜೆಗಳನ್ನು ಹೊಂದಿ ಅವರ ಇಷ್ಟಾರ್ಥಗಳನ್ನು ಕೊಡುವೆನೆಂದು ಭಗವಂತನು ಹೇಳಿರುವದನ್ನು ವಿಷ್ಣುಪುರಾಣದಲ್ಲಿ ತಿಳಿಸಿರುತ್ತೆ. ಶ್ಲೋ॥ ಆಕಾಶಾತ್ಪತಿತಂತೋಯಂ। ಯಥಾಗಚ್ಛತಿಸಾಗರಂ। ಸರ್ವದೇವನಮಸ್ಕಾರಃ। ಕೇಶವಂ ಪ್ರತಿಗಚ್ಛತಿ॥ ಎಂದು ಹೇಳಿರುತ್ತೆ. ಆದ್ದರಿಂದ,

(ತೊಹರಾ)

ವಂದಿಸುವೆನು ಶ್ರೀ ವಾಸುದೇವನಿಗೆ ವಂದಿಸುವೆನು ಸದ್ವಿಪ್ರರಿಗೆ।
ಚಂದದಿಂದಲೀ ಸಾಷ್ಟಾಂಗನಮಸ್ಕಾರಗೈವೆ ಹರಿದಾಸರಿಗೆ॥

ವಚನ॥ ಆದರೆ ಕೆಲವರಿಗೆ ಇದುಯೇನು ಬ್ರಾಹ್ಮಣರಿಗೆ ಮುಂದಾಗಿ ನಮಸ್ಕಾರಮಾಡುವ ಕಾರಣವೇನೆಂಬ ಸಂದೇಹಬರಬಹುದು. ಶ್ಲೋ॥ ದೈವಾಧೀನಂ ಜಗತ್ಸರ್ವಂ ಮಂತ್ರಾಧೀನಂತುದೈವತಂ। ತನ್ಮಂತ್ರಂ ಬ್ರಾಹ್ಮಣಾಧೀನಂ ಬ್ರಾಹ್ಮಣೋಮಮದೇವತಾ॥ ಎಂಬದಾಗಿ ಶ್ರೀ ಕೃಷ್ಣದೇವರು ನುಡಿದಿರುವರು. ಆದ್ದರಿಂದ ಬ್ರಾಹ್ಮಣರಿಗೆ ನಮಸ್ಕಾರಮಾಡುವೆನು. ಅಂದರೆ ಅರಣ್ಯಪರ್ವದಲ್ಲಿ ಅಜಗರನು ಧರ್ಮರಾಯನಂ ಕುರಿತು, ಬ್ರಾಹ್ಮಣಃಕೋಽಭವೇದ್ರಾಜನ್ ಎಂದು ಪ್ರಶ್ನೆಮಾಡಲು ಧರ್ಮರಾಯನು, ಶ್ಲೋ॥ ಸತ್ಯಂದಾನಂ ಕ್ಷಮಾಶೀಲಮಾನೃಶಂಸ್ಯಂತಪ್ರೋಘೃಣಾ। ದೃಶ್ಯಂತೇಯತ್ರನಾಗೇಂದ್ರ, ಸಬ್ರಾಹ್ಮಣ ಇತಿಸ್ಮೃತಃ॥ ಶೂದ್ರೇತುಯದ್ಭವೇಲ್ಲಕ್ಷ್ಮದ್ವಿಜೇತಚ್ಚನವಿದ್ಯತೆ। ನವೈಶೂದ್ರೋಭವೇತ್‌ಶೂದ್ರಃ ಬ್ರಾಹ್ಮಣೋ

ನಚಬ್ರಾಹ್ಮಣಾಃ ॥ ಎಂಬಂತೆ ಸತ್ಯವೂ ದಾನವನ್ನು ಕೊಡುವಿಕೆಯೂ, ತಾಳ್ಮೆಯೂ, ಇಂದ್ರಿಯನಿಗ್ರಹವೂ, ಒಳ್ಳೇ ನಡತೆಯೂ, ಅಹಿಂಸೆಯೂ, ತಪಸ್ಸು ಮಾಡುವಿಕೆಯೂ, ಕನಿಕರವೂ, ಈ ಸುಗುಣಂಗಳು ಇದ್ದವನೇ ಸದ್ಬ್ರಾಹ್ಮಣನು. ಇವುಇಲ್ಲದವನು ಬ್ರಾಹ್ಮಣನಲ್ಲ. ಶೂದ್ರನಲ್ಲಿ ಈ ಸುಗುಣಗಳಿದ್ದರೆ ಅವನೇ ಬ್ರಾಹ್ಮಣನೆಂದೆಣಿಸಬೇಕು.

ಬ್ರಾಹ್ಮಣನು ಸ್ವಕರ್ಮಾನುಷ್ಠಾನಪರನಾಗಿದ್ದಲ್ಲಿ ಆತನೇ ನನಗೆ ದೇವರೆಂದು ಶ್ರೀ ಕೃಷ್ಣನು ಹೇಳಿರುವನು. ಅದಕಾರಣ, ಶ್ಲೋ ॥ ಭೂತಾನಾಂ ಪ್ರಾಣಿನಶ್ರೇಷ್ಠಾಃ ಪ್ರಾಣಿನಾಂ ಬುದ್ಧಿಜೀವನಃ । ಬುದ್ಧಿಮತ್ಸುನರಾಶ್ರೇಷ್ಠಾಃ ನರೇಷುಬ್ರಾಹ್ಮಣಾಸ್ಮೃತಾ ॥ ಎಂದು ಹೇಳಿರುವದರಿಂದ ಸದ್ಬ್ರಾಹ್ಮಣರಿಗೆ ನಮಸ್ಕಾರಮಾಡುವೆನು. ಈ ಕಲಿಕಾಲದಲ್ಲಿ ಬೆಳಗ್ಗೆ ಔಪಾಸನೆ ಮಾಡುವದಕ್ಕೆ ಪ್ರತಿಯಾಗಿ ಬೀಡಿ ಸಿಗರೇಟ್ ಮುಂತಾದುವನ್ನು ಸೇದುವದು, ಮಡಿ ಮಾಡುವುದಕ್ಕೆ ಪ್ರತಿಯಾಗಿ ಅಲ್ಲಲ್ಲಿ ಚರ್ಮದಲಂಕಾರ ಮಾಡಿಕೊಳ್ಳುವುದು, ಇದೂ ಅಲ್ಲದೆ,

(ತೋಹರಾ)

ವಿಸಾರಿಬೆಳಸಿ ಮುಂದಲೆಯನು ಕೂದಲ ಮಾರೆಯಾಗಿ ಬಾಚುವರು ।
ಕ್ಷೌರಕತ್ತರಿಯನು ಕೈಲಿಪಿಡಿದು ಮುಖಕ್ಷೌರಮಾಡಿಕೊಳ್ಳುವರು ॥

ವಚನ ॥ ಮುಂದಲೆಬೆಳಸಿ ಬಾಚುತ್ತಾ, ಓರೆಮಾಡುತ್ತಾ, ಮುಖಕ್ಷೌರವನ್ನು ಮಾಡಿಕೊಳ್ಳುತ್ತಾ, ಫಣೆಯೊಳ್ ಸಾದು ಚುಕ್ಕೆಯನ್ನಿಡುತ್ತಾ, ನಾಟಕಂಗಳಾಡುತ್ತಾ, ಅನುಷ್ಠಾನಗಳನ್ನು ಅನಿಷ್ಟಕಷ್ಟವೆಂದು ಬಿಟ್ಟು, ಇಷ್ಟವಾದ ಭ್ರಷ್ಟನಡತೆಗಳಿಂದ ನಡೆಯುತ್ತಿರುವರು. ಮತ್ತು,

॥ಕಂದ॥

ತನುವಿನ ಷರಾಯಿ ಬೂಟ್ಸುಗ । ಳನು ಕಳಚದೆ ಕಾಫಿಕ್ಲಬ್ಬಿನೊಳಗೆಲ್ಲರೊಳುಂ। ಮನಬಂದಂದದಿ ಕುಡಿಯುತ । ತಿನುತಿರ್ಪರು ಪೇಳ್ವುದೇನು ಕೆಲವರು ಧರೆಯೊಳ್ ॥

॥ ವಚನ ॥

ಕೆಲವರು ಕಾಫೀಕ್ಲಬ್ಬುಗಳಿಗೆ ಹೋಗಿ ಟೋಪಿ, ಕೋಟು, ಷರಾಯಿ, ಬೂಟ್ಸು, ಮುಂತಾದಲಂಕಾರಗಳಿಂದಲೇ ಬೇಕಾದ ಪದಾರ್ಥಂಗಳಂ

ಕೈಸೋಕಿದರೆ ಕೊಳೆಯಾಗುವುದೆಂದು ಚಂಚಾಗಳಿಂದಲೇ ತಿನ್ನುತ್ತ, ಲೆಮ್ನೆಡ್, ಸೋಡಾ, ಬ್ರಾಂದಿ ಮೊದಲಾದ ಪಾನಂಗಳಿಂದ ತೃಪ್ತರಾಗುವರು.

ತೊಹರಾ

ನಿಷ್ಟೆಗಳನು ತಾವ್ ಬಿಟ್ಟೇ ಬಿಟ್ಟವರೆಷ್ಟುಜನವ್ರೊಕೊನೆಗೆ ।
ಕೆಟ್ಟನಡತೆಗತಿ ಶ್ರೇಷ್ಠರು ಹಲಬರು ಪಟ್ಟಣದವರೊಳಗೆ ॥

॥ ವಚನ ॥

ಕೆಲವರು ಸ್ನಾನವನ್ನು ಮಾಡದಿದ್ದರೆ ಮೈ ಕೆಟ್ಟವಾಸನೆಯಾಗುವದೆಂದು ಅದನ್ನು ಆಚರಿಸುತ್ತಾ, ಸಂಧ್ಯಾವಂದನೆ, ಜಪ, ತಪ, ಹೋಮ, ನೇಮ, ನಿಷ್ಠೆ, ದೇವತಾರಾಧನೆ ಮುಂತಾದವುಗಳನ್ನು ಕಾಲಿಗೆ ತುಳಿದು ಪರ್ವಕಾಲದೊಳಾದರೂ ಸ್ವಲ್ಪಹೊತ್ತು ಹಸಿದಿರದೆ ಭಕ್ಷಿಸುತ್ತಾ ಇರುವರು. ಐಶ್ವರ್ಯವಂತರು ಸ್ವಲ್ಪಸ್ವಲ್ಪ ಅನಾಚಾರ ಅಕೃತ್ಯಗಳನ್ನು ಮಾಡಿದರೆ ಬಡವರಾದವರು ನಾವುಗಳು ದೊಡ್ಡಮನುಷ್ಯರೆನಿಸಿಕೊಳ್ಳಬೇಕೆಂದು ಮತ್ತಷ್ಟು ಅನಾಚಾರ ಅಕೃತ್ಯಗಳನ್ನು ಮಾಡುತ್ತಿರುವರು. ಇನ್ನೂ ಕೆಲವರು ತಾವು ಮಾಡಿದ ದುಷ್ಟನಡತೆಗಳನ್ನು ಜಂಭದಿಂದ ಮತ್ತೊಬ್ಬರೊಡನೆ "ನನ್ನ ಮೈ ಕಾಂತಿಯನ್ನು ನೋಡಿದಿರಾ? ನಾನು ಒಂದು ಮಂಡಲಕಾಲ ವಿಸಾನು ಎಣ್ಣೆಯನ್ನು ಸೇವಿಸಿದೆನಾದ್ದರಿಂದ ಈ ತೇಜಸ್ಸು ಉಂಟಾಯಿತು." ಎಂದು ಹೇಳುತ್ತಾ, ಆಸ್ಪತ್ರೆಗಳಲ್ಲಿ ಯಾರು ನೀರು ಹಾಕಿ ಕೊಟ್ಟರೂ ಅದನ್ನು ಕುಡಿಯುತ್ತಿರುವರು. ಇಷ್ಟೇ ಅಲ್ಲ,

॥ ಕಂದ ॥

ತಂದೆಯ ವೈದೀಕದ ದಿನ । ಮುಂದಾಗಿಯೆ ಕಾಫಿ ರೋಟಿ ಮುಂತಾದವುಗಳ್ । ತಿಂದೇ ಶ್ರಾದ್ಧವಗೈಯುತ । ಚಂದದಿ ಭುಂಜಿಪರು ಕೆಲಬರಿರುಳೊಳುಹಾಹಾ ॥

ವಚನ ॥ ತಂದೆ ತಾಯಿಗಳ ಶ್ರಾದ್ಧದ ದಿನದಲ್ಲಿ ಆದರೂ ನಿಯಮದಿಂದಿರದೆ ಹಾಸಿಗೆಯಿಂದೇಳುವಾಗ್ಗೆ ಕಾಫಿ ಮುಂತಾದ್ದು ಕುಡಿದು, ರೋಟಿ ಬಿಸ್ಕತ್ತು ಮುಂತಾದ್ದನ್ನು ತಿಂದು, ಅನಂತರ ಪರಿಚಾರಕನಿಗೆ ಘಂಟೆಗೆಲ್ಲಾ ಅಡಿಗೆ ತಯಾರಾಗಬೇಕೆಂದು ಹೇಳಿ, ಪುರೋಹಿತರನ್ನು ಕರಿಸಿ, ನೀವು ಮಂತ್ರಗಳನ್ನು ಬೇಗ ಬೇಗ ಹಾಗೆಂದುಬಿಡಿ; ನನಗೆ ಹೊತ್ತಾಯಿತೆಂದು ಜಾಗ್ರ

ತೆಯಾಗಿ ತಿಥಿ ನೆರವೇರಿಸಿ, ರಾತ್ರಿಗಾದರೂ ಉಪವಾಸವಿರದೆ ಬೇಕಾದ ಭಕ್ಷ್ಯ ಭೋಜ್ಯಗಳನ್ನು ಭುಂಜಿಸುತ್ತಿರುವರು. ಮತ್ತು,

॥ಕಂದ॥

ಮುದುಕರು ವಿಟರಾಗುತ ಸಂ । ಬಿದವರ ಕೆಡಿಸುತ್ತಲಿಹರು ನಾನಾ ಪರಿಯೊಳ್ ॥ ಸದನದಿ ಕದನಂಹೆಚ್ಚಿತು । ವಿಧವೆಯರೊಳು ವೇಶಿಕಾರ್ಯ ವರ್ಧಿಪುದೀಗಳ್ ॥

ವಚನ ॥ ವೃದ್ಧರಾದವರು ಕೊರಳಿನೊಳ್ ಜಪಸರಂಗಳಂ ಹಾಕಿಕೊಂಡು ಆಚಾರಪುರುಷರೆಂಬಂತೆ ಮೇಲಿನ ನಟನೆ ತೋರುತ್ತಾ ವಿಟಪುರುಷರಾಗಿ ತಮ್ಮನ್ನು ನಂಬಿದ್ದ ಅನಾಥೆಯರನ್ನು ನಾನಾವಿಧದಲ್ಲಿ ಕೆಡಿಸುತಿರುವರು. ಮನೆಮನೆಗಳಲ್ಲಿಯೂ ಕಲಹಗಳು ಹೆಚ್ಚಿತು. ವಿಧವೆಯರಲ್ಲಿ ಜಾರಿಣಿಯರು ಹೆಚ್ಚಾಗಿರುವರು. ಇನ್ನೂ ಅನೇಕರು,

॥ ಸೀಸಪದ್ಯ ॥

ಉತ್ತಮರ ಮತದವರು ಪೃಥ್ವಿಯೊಳ್ ಕೆಲಕೆಲರು । ಮಾದಕ ಪದಾರ್ಥಗಳ ಮೆದ್ದುಕೊಂಡು । ಮಾತೃಭಾಷೆಯ ಕಳುಹಿ ಪಿತೃಲೋಕ ಮಾರ್ಗಕ್ಕೆ । ಜಾತಿಧರ್ಮಂಗಳನು ಸುಟ್ಟುರುಹಿಯೆ । ಲಂಚಂಗಳನು ತಿಂದು ವಂಚನೆಯ ಮಾಡುತ್ತೆ । ರಾಜದ್ರೋಹವಗೈದು ಪೂಜ್ಯರೆಂದು । ಕೂಟ ಸಾಕ್ಷ್ಯವ ನುಡಿದು । ಕುಲವನ್ನು ದೂಷಿಸುತ ಧರ್ಮಪತ್ನಿಯ ತ್ಯಜಿಸಿ ದಂಭಗೈದು । ಹೀನಜಾತೆಯರ ಸಂಗಮಕೆ ಹೇಸದಿಹರು । ನೂತ್ನವಚನದೊಳನಿಶವುಂ ನಲಿಯುತಿಹರು । ವೇದಶಾಸ್ತ್ರದ ರೀತಿಯನೊಪ್ಪದಿಹರು । ಸಾಧುಜನಗಳ ಬಾಧಿಸಿ ದೂರುತಿಹರು ॥

ವಚನ॥ ಕೆಲವರು ನಿಷಾ ಪದಾರ್ಥಗಳನ್ನು ಸೇವಿಸುವವರಾಗಿಯೂ, ಮಾತೃಭಾಷೆಯಾದ ಸಂಸ್ಕೃತವನ್ನು ನರಕಕ್ಕೆ ಕಳುಹಿ, ಬ್ರಾಹ್ಮಣ ಧರ್ಮಂಗಳನ್ನು ದಗ್ಧವಂಗೊಳಿಸಿ, ಲಂಚಂಗಳಂ ತಿನ್ನುತ್ತಾ, ರಾಜದ್ರೋಹವಂಗೈಯುತ್ತಾ, ಸ್ತ್ರೀಯರಿಗೆ ಸ್ವಾತಂತ್ರ್ಯವಂ ಕೋರುತ್ತಾ, ಅವರ ಆಜ್ಞಾನುಸಾರವಾಗಿ ನಡೆಯುತ್ತಾ, ತಪ್ಪು ಸಾಕ್ಷಿಗಳನ್ನು ಹೇಳುತ್ತಾ, ದೀನರನ್ನೂ ಸಾಧುಗಳನ್ನೂ ಬೈದು ಹೊಡೆದು ಬಾಧಿಸುತ್ತಾ, ಸ್ವಕುಲವನ್ನು ದೂಷಿಸುತ್ತಾ, ಪರಿಣಯವಾದ ಪತ್ನಿಯನ್ನು ಬಿಟ್ಟು, ಹೀನಜಾತೆಯರ

ಸಂಗಮವಂ ಗೈಯುತ್ತಾ, ವೇದಶಾಸ್ತ್ರಂಗಳಂ ನಿಂದಿಸುತ್ತಾ ಇರುವರು, ಮತ್ತು,

(ಶೋಹರಾ)

ಮುನ್ನಿನ ನಡತೆಗೆ ಸೊನ್ನೆಯ ಸುತ್ತುತಲನ್ಯಾಯವಗೈಯುವರು ।
ಕನ್ಯಾಶುಲ್ಕವ ತೆಗೆದುಕೊಳ್ಳುವರು ಜನ್ನಗಳನು ಬಿಟ್ಟಿಹರು ॥

ವಚನ ॥ ಮೊದಲು ಮಾಡುತ್ತಿದ್ದ ಸತ್ಕರ್ಮವನ್ನು ಶೂನ್ಯಮಾಡಿದರು. ಈಗ ಮಾಡುವ ಬ್ರಹ್ಮಯಜ್ಞ ಪಿತೃಯಜ್ಞ ಮುಂತಾದ್ದು ಸಹ ಬಿಟ್ಟಂಥವರಾದವರು ಕೆಲವರು. ಇನ್ನೂ ಕೆಲವರು, ನಮ್ಮ ಹೆಣ್ಣನ್ನು ಕೊಡಬೇಕಾದರೆ ನಾನೂರು ರೂಪಾಯಿಗಳು ಕೊಡುತ್ತೀರೊ, ೧೦೦೦ ರೂಪಾಯಿಗಳು ಕೊಡುತ್ತೀರೊ ಎಂದು ಕೇಳುತ್ತಾರೆ. ಇನ್ನು ಕೆಲವರು, ನರಸಿಂಹಾಚಾರ್ರೇ, ನಿಮ್ಮ ಮಗನಿಗೆ ನನ್ನ ಮಗಳನ್ನು ಕೊಡುತ್ತೇನೆ, ಮಾಡಿಕೊಳ್ಳಿ, ಹುಡುಗಿ ಜಾಣೆ ಎಂದು ಹೇಳಿದರೆ, ಅವರು. ಕೇಶವಾಚಾರ್ರೆ, ಈ ನಡುವೆ ಸಾವಿರ, ಎರಡುಸಾವಿರ ಕೊಡುತ್ತೇವೆಂದು ಕಾಗದಗಳು ಬಂದಿದ್ದವು. ನಮ್ಮ ಹುಡುಗನು, ಯಾವದೋ ಊರಿನಲ್ಲಿ ಒಬ್ಬ ಸಾಹುಕಾರ ಬ್ರಾಹ್ಮಣನಿಗೆ ಒಬ್ಬಳೇ ಮಗಳಿರುವಳಂತೆ! ಅವಳಿನ್ನೂ ಋತುಮತಿಯಾಗಲಿಲ್ಲವಂತೆ, ಮೊದಲು ಗಂಡನು ಹೋಗಿ ೧ ತಿಂಗಳಾಯಿತಂತೆ ಪ್ರಸ್ಥ ಮಾಡಿಕೊಂಡರೆ ೫೦೦೦ ರೂಪಾಯಿಗಳು ಕೊಡುತ್ತಾನಂತೆ ಅದನ್ನು ಮಾಡಿಕೊಳ್ಳುತ್ತೇನೆಂದು ಹೇಳುತ್ತಾನೆ, ನನಗೇನೊ ಸಮಾಧಾನವೇ, ನಮ್ಮ ಅಣ್ಣಂದಿರು ಆಗದೆಂದು ಹೇಳುತ್ತಾರೆ. ಆಗಲಿ. ನೀವು ವರಪೂಜೆಗೆ ೨೦೦೦ ರೂಪಾಯಿಗಳಾದರೂ ಕೊಟ್ಟರೆ ನಿಮ್ಮ ಯೋಗ್ಯತೆಯನ್ನು ನೋಡಿ ಮದುವೆ ಮಾಡಿಕೊಳ್ಳಬಹುದೆಂದು ಮಗನಿಗೆ ಪತ್ರ ಬರೆಯುತ್ತೇನೆಂದು ಹೇಳುತ್ತಾರೆ. ಇನ್ನೂ ಕೆಲವರು ಜಾತಿಭೇದವಂ ನೋಡದೆ, ವಯಸ್ಸನ್ನು ವಿಚಾರಿಸದೆ ಪ್ರಸ್ಥಗಳನ್ನು ಮಾಡುತ್ತಿರುವರು. ಆದರೆ ಇಲ್ಲಿ ನೆರೆದಿರುವರೆಲ್ಲರು ಇಂಥಾ ನಡತೆಯುಳ್ಳವರಿಗೆ ವೈರಿಗಳಾಗಿ ಸುಗುಣಿಗಳಾಗಿರುವರಾದ್ದರಿಂದ ಅಂಥಾ ಸದ್ಬ್ರಾಹ್ಮಣರೇ ಶಾಪಾನುಗ್ರಹಸಮರ್ಥರು. ಅವರ ನುಡಿಯೇ ವೇದವಾಕ್ಯವು.

(ತೊಹರಾ)

ವಂದಿಸುವೆನು ಶ್ರೀ ವಾಸುದೇವನಿಗೆ ವಂದಿಸುವೆನು ವಿಪ್ರರಿಗೆ।
ಚಂದದಿಂದಲೀ ಸಾಷ್ಟಾಂಗನಮಸ್ಕಾರಗೈವೆ ಹರಿದಾಸರಿಗೆ॥

ವಚನ॥ ಇಲ್ಲಿ ಕೆಲವರ ಅಭಿಪ್ರಾಯ, ಸತ್ಕರ್ಮಾನುಷ್ಠಾನಪರರಾದ ಬ್ರಾಹ್ಮಣರಿಗೆ ನಮಸ್ಕಾರ ಮಾಡಿದ ನಂತರವಾದರೂ ನಮ್ಮನ್ನು ಎಣಿಸಲವಶ್ಯಕವಿಲ್ಲದೆ ದಾಸರಿಗೆ ನಮಸ್ಕಾರವೆಂದು ಹೇಳುತ್ತಾರಲ್ಲಾ! ದಾಸರು ಯಾವ ಮತಸ್ಥರಾದರೂ ಆಗಬಹುದಲ್ಲವೇ? ಉತ್ತಮರು ಕೀಳುಜಾತಿಯವರಿಗೆ ನಮಸ್ಕಾರ ಮಾಡಬಹುದೇ, ನಮ್ಮನ್ನು ಬಿಡಬಹುದೇ ಎಂಬ ಸಂದೇಹವಿರಬಹುದು. ಹಾಗೆ ಸಂಶಯಪಡಬಾರದು. ಯಾತಕ್ಕೆಂದರೆ, ಶ್ಲೋ॥ ಶ್ವಪಚೋಪಿಮಹೀಪಾಲ ವಿಷ್ಣುಭಕ್ತೋ ದ್ವಿಜಾಧಿಕಃ। ವಿಷ್ಣುಭಕ್ತಿ ವಿಹೀನಸ್ತು ಯತಿಶ್ಚಶ್ವಪಚಾಧಮಃ॥೧॥ ಮದ್ಭಕ್ತಜನ ವಾತ್ಸಲ್ಯಂ ಪೂಜಾಯಾಂ ಚಾನುಮೋದನಂ। ಸ್ವಯಮಭ್ಯರ್ಚನಂಚೈವ ಮದರ್ಥೇ ಡಂಭವರ್ಜನಂ॥ ಮತ್ಕಥಾಶ್ರವಣೇ ಭಕ್ತಿಃ ಸರ್ವನೇತ್ರಾಂಗ ವಿಕ್ರಿಯಾ। ಮಮಾನುಸ್ಮರಣೇ ನಿತ್ಯಂ ಯಶ್ಚಮಾನ್ನೋಪಜೀವತಿ॥೨॥ ಭಕ್ತಿರಷ್ಟವಿಧಾಹ್ಯೇಷಯಸ್ಮಿನ್ ಮ್ಲೇಛ್ಛೇಪಿವರ್ತತೆ। ಸವಿಪ್ರೇಂದ್ರೋ ಮುನಿಶ್ರೀರ್ಮಾನ್ ಸಯತಿಸ್ಸಚ ಪಂಡಿತಃ॥೩॥ ಎಂಬದಾಗಿ ಹೇಳಿರುವದು. ಇದೂ ಅಲ್ಲದೆ ಶ್ಲೋ॥ ಚಂಡಾಲಮಪಿಮದ್ಭಕ್ತಂ ನಾವಮನ್ಯೇತ ಬುದ್ಧಿಮಾನ್। ಅವಮನ್ಯವಿಮೂಢಾತ್ಮಾ ರೌರವಂ ನರಕಂವ್ರಜೇತ್॥ ವಚನ॥ ಮಹಾಭಾರತದಲ್ಲಿ ಶ್ರೀ ಕೃಷ್ಣಸ್ವಾಮಿಯು ನನ್ನ ಭಕ್ತನಾದ ಚಂಡಾಲನನ್ನು ಯಾವನು ಅವಮಾನ ಪಡಿಸುವನೋ ಅವನು ರೌರವಾದಿ ನರಕವಂ ಪೊಂದುವನು ಎಂದು ಹೇಳಿರುವಕಾರಣ, ಚಂದದಿಂದಲೇ ಸಾಷ್ಟಾಂಗ ನಮಸ್ಕಾರಗೈವೆ ಹರಿದಾಸರಿಗೆ॥ ಅಂದರೆ ಭಗವದ್ಭಕ್ತನೇ ಪರಮಭಾಗವತನಾಗಿ ಪ್ರಕಾಶಿಸುವನು, ಆದರೆ ನವವಿಧಭಕ್ತಿಯುಂಟು. ಶ್ಲೋಕ॥ ಶ್ರವಣಂ ಕೀರ್ತನಂ ವಿಷ್ಣೋಃ ಸ್ಮರಣಂ ಪಾದಸೇವನಂ। ಅರ್ಚನಂ ವಂದನಂ ದಾಸ್ಯಂ ಸಖ್ಯಮಾತ್ಮನಿವೇದನಂ॥ ವಚನ॥ ಹರಿಕಥೆಯನ್ನು ಕೇಳುವುದು, ಹರಿನಾಮಸಂಕೀರ್ತನೆ ಮಾಡುವುದು, ಮನಸ್ಸಿನಲ್ಲಿ ಧ್ಯಾನಮಾಡುವುದು, ಪಾದಸೇವೆ ಮಾಡುವುದು, ಅರ್ಚನೆ ಮಾಡುವುದು, ನಮಸ್ಕಾರ

ಮಾಡುವುದು, ದಾಸಭಾವದಿಂದಿರುವುದು, ಸ್ನೇಹ ಮಾಡುವುದು, ಆತ್ಮಸಮ ರ್ಪಣೆ ಮಾಡುವುದು, ಈ ಒಂಭತ್ತು ವಿಧವಾದ ಭಕ್ತಿಯುಂಟು. ಈ ಭಕ್ತಿಗಳಿಂದ ಯಾರಾದರು ಕೈವಲ್ಯವನ್ನು ಹೊಂದಿದ್ದಾರೆಯೇ, ಅಂದರೆ, ಶ್ಲೋ ॥ ಶ್ರೀವಿಷ್ಣೋಃಶ್ರವಣೇ ಪರೀಕ್ಷಿತರ ಭೂದ್ವೈಯಾಸಕೀ ಕೀರ್ತನೇ । ಪ್ರಹ್ಲಾದಸ್ಮರಣೇ ತದಂಘ್ರಿಭಜನೇ ಲಕ್ಷ್ಮೀಃಪೃಥುಃ ಪೂಜನೇ । ಅಕ್ರೂರ ಸ್ತ್ವಭಿವಂದನೇಚ ಹನುಮಾನ್ ದಾಸ್ಯೇಚಸಖ್ಯೇರ್ಜುನಃ । ಸರ್ವಸ್ವಾತ್ಮನಿವೇ ದನೇ ಬಲಿರಭೂತ್ಕೈವಲ್ಯ ಮೇಷಾಂಪದಂ ॥ ವಚನ ॥ ಪರಿಕ್ಷಿತರಾಯನು ಹರಿಕಥೆಯನ್ನು ಕೇಳಿದ್ದರಿಂದಲೂ, ವ್ಯಾಸಪುತ್ರನಾದ ಶುಕಮಹರ್ಷಿಯು ಹರಿಕೀರ್ತನೆಯನ್ನು ಹೇಳುವುದರಿಂದಲೂ, ಪ್ರಹ್ಲಾದನು ಸ್ಮರಣೆಯಿಂದಲೂ, ಲಕ್ಷ್ಮೀದೇವಿಯು ಪಾದಸೇವೆಯಿಂದಲೂ, ಪೃಥು ಚಕ್ರವರ್ತಿಯು ಪೂಜೆ ಯಿಂದಲೂ, ಅಕ್ರೂರನು ನಮಸ್ಕಾರದಿಂದಲೂ, ಹನುಮಂತನು ದಾಸತ್ವ ದಿಂದಲೂ, ಅರ್ಜುನನು ಸ್ನೇಹದಿಂದಲೂ, ಬಲಿಚಕ್ರವರ್ತಿಯು ಸರ್ವ ಸ್ವತ್ತುಗಳೊಡನೆ ಆತ್ಮನಿವೇದನೆ ಮಾಡೋಣದರಿಂದಲೂ ಪರಮಪದವಿ ಯನ್ನು ಪಡೆದರು. ಆದರೆ ಈ ಸಭೆಯಲ್ಲಿ ನೆರೆದಿರುವರೆಲ್ಲರೂ ಹರಿಕಥೆ ಯನ್ನು ಕೇಳಬೇಕೆಂಬ ಉದ್ದೇಶದಿಂದ ಬಂದಿರುವರಾದ ಕಾರಣ, ನವವಿಧ ಭಕ್ತಿಯಲ್ಲಿ ಪ್ರಥಮಭಕ್ತಿಯು ಹರಿಕಥೆಯನ್ನು ಕೇಳುವರಿಗೆಲ್ಲರಿಗೂ ಇರು ವದಾದಕಾರಣ, ಚಂದದಿಂದಲೇ ಸಾಷ್ಟಾಂಗನಮಸ್ಕಾರಗೈವೆ ಹರಿದಾಸ ರಿಗೆ ॥ ವಚನ ॥ ಈಗ ಹೇಳಿದ ನವವಿಧಭಕ್ತಿಗಳು ಶ್ರೇಷ್ಠವಾದವು, ಆದರೆ ಈ ಭಕ್ತಿಭಾಗ್ಯಗಳಿಗೆಲ್ಲಾ ಮೂಲಾಧಾರವೊಂದಿರುವುದು. ಯಾವುದೆಂದರೆ,

(ರಾಗ—ಆದಿತಾಳ, ವೇದವೇದ್ಯನೆ ಎಂಬಂತೆ)

ಆರೋಗ್ಯವೇ ಭಾಗ್ಯ । ಸರ್ವರಿಗಾರೋಗ್ಯವೇ ಭಾಗ್ಯ ॥ ಭೋಗ್ಯ ವಾದ ವಸ್ತುಗಳೊಳು ಯೋಗ್ಯವೆನಿಸಿ ಮೆರೆಯುವಂಥಾ ॥ಅ॥ ಮೂರು ಲೋಕದ ಜೀವಿಗಳಿಗೆ ಮೂಲಾಧಾರವಾಗಿರುವ ॥ಆ॥ ಆರ್ತರನ್ನು ಪಾಲಿಸೆ ಹರಿ । ಕೀರ್ತನೆಯನು ನುಡಿಯೆಲಾಲಿಸೆ । ತೀರ್ಥಯಾತ್ರೆಗಳ ಗಮಿಸೆ ॥ ಕೀರ್ತಿಕಳೆದು ಸುಖದಿಜೀವಿಸೆ ॥೧॥ ಭುಕ್ತಿಗೊಂಡು ಶಕ್ತಿಕೂಡಿ । ಯುಕ್ತಿ ಯೋಚನೆಗಳೊಡೆ ! ಸೂಕ್ತದಿಂದ ಭಜನೆಮಾಡೆ ಮುಕ್ತಿಮಾರ್ಗವನ್ನು ನೋಡೆ ॥೨॥ ಸಕಲಕರ್ಮ ಧರ್ಮಗಳಿಗು ನಿಖಿಲವಾದ ಕಾರ್ಯಗಳಗೂ

ಭಕುತಿ ನವವಿಧಗಳಿಗೂ ಶ್ರೀಲಕ್ಷ್ಮೀಧವನ ಸೇವೆಗಳಿಗೂ ಆರೋಗ್ಯವೇ ಭಾಗ್ಯ.

॥ ವಚನ ॥

ಮೂರು ಲೋಕದಲ್ಲಿಯೂ ಇರತಕ್ಕ ಎಲ್ಲಾ ಜೀವಿಗಳಿಗೂ ಆರೋಗ್ಯಭಾಗ್ಯಕ್ಕಿಂತಲೂ ಅತಿಶಯವಾದ ಭಾಗ್ಯವು ಮತ್ತಾವದೂ ಇರಲಾರದು ಹೇಗಂದರೆ—ತಾನು ಕ್ಷೇಮವಾಗಿದ್ದರಲ್ಲವೇ ಮತ್ತೊಬ್ಬನ ಕ್ಷೇಮವನ್ನು ವಿಚಾರಿಸುವುದು. ಇಲ್ಲವಾದರೆ ಯಾವದೂ ಬೇಕಾಗಿರುವದಿಲ್ಲ. ಯಾವಕಾರ್ಯಂಗಳಂ ಮಾಡಬೇಕಾಗಿದ್ದರೂ ಆರೋಗ್ಯವಿದ್ದರಲ್ಲವೇ! ಇಲ್ಲಿ ನೆರೆದಿರುವರಲ್ಲಿ ಹರಿಕಥೆಯನ್ನು ಮನಸ್ಸಿಟ್ಟು ಕೇಳಬೇಕಾದರೂ ಆರೋಗ್ಯವಾಗಿದ್ದರಲ್ಲವೇ! ಇಂಥಾ ಆರೋಗ್ಯ ಉಂಟಾಗಬೇಕಾಗಿದೆ

॥ ಕಂದ ॥

ಮಿತಿಮೀರದೆ ನಡೆಯುತಶ್ರೀ । ಪತಿಸಮ ಧನ್ವಂತರಿಯನು ಪೂಜಿಪಮನುಜಂ । ಸತತಾರೋಗ್ಯವ ಪೊಂದುತ । ಕ್ಷಿತಿಯೊಳಗೈಶ್ವರ್ಯ‌ಪಡೆದು ಸೌಖ್ಯದಿಬಾಳ್ಕಂ ॥




॥ ವಚನ ॥

ಆರೋಗ್ಯಭಾಗ್ಯವನ್ನು ಕೊಡಬೇಕಾದರೆ ಹರಿಸ್ವರೂಪನಾದ ಧನ್ವಂತರಿಯನ್ನು ಭಕ್ತಿಭಾವದಿಂದ ಪೂಜಿಸಿದರೆ ಆ ಮಹಾತ್ಮನು ಕೊಡುವನು. ಆದ್ದರಿಂದ ಸರ್ವರೂ ಆ ಧನ್ವಂತರಿಯನ್ನು ಧ್ಯಾನಿಸುವದು ಮೇಲು.

ಇದಲ್ಲದೆ ಇಲ್ಲಿ ಅನೇಕರು ಧನ್ವಂತರಿಯನ್ನು ಪೂಜಿಸುವ ವಿಧಾನವು ಹೇಗೋ ಆ ಧನ್ವಂತರಿಯ ಕಥೆಯನ್ನೇ ಈ ದಿನ ಕೇಳಬೇಕೆಂಬ ಕುತೂಹಲ ಪಡುತ್ತಿರುದ್ದರಿಂದ ಕಥಾ ಪ್ರಾರಂಭದಲ್ಲಿ ಶ್ರೀಧನ್ವಂತರಿಯನ್ನು ಪ್ರಾರ್ಥಿಸಬೇಕಾದ್ದು ಕರ್ತವ್ಯ.

ವಂಶವೃಕ್ಷ.

(ರಾಗ—ಗುರುಮಹರಾಜ್ ಯಂಬಂತೆ)

ಶರಣಾಗತ ಸಂಜೀವಾ । ಸದ್ಗುರು ಧನ್ವಂತರಿದೇವಾ ॥ ಪ ॥ ದುರಿತ ರೋಗಗಳ ಪರಿಹರಿಸೆನ್ನುತ । ಮರೆಹೊಕ್ಕೆನು ನಿನ್ನ ಮಹಾನುಭಾವಾ ॥ ಅ ॥ ಸುಧಾಬ್ಧಿಸಂಭವ ಸುಧಾಕಲಶಧರ । ಚಿದಾನಂದನಿನ್ನ ಸದಾಭಜಿಸುವೆನು ॥ ೧ ॥ ಆದಿವೈದ್ಯನಿನ್ನ ಪಾದಪದ್ಮವಾ । ರಾಧನಗೈವರ ನೋದದ ಸಲಹುವ ॥ ೨ ॥ ಭಕುತಿ ಭಾವದೊಳು ಭಜಿಸುವ ಸುಜನರ । ಸಕಲ ರೋಗಗಳ ಕ್ಷಣದೊಳು ಸಿಲಿಸುವ ॥ ೩ ॥ ಸುರರ ಪೊರೆಯೆ ಶ್ರೀ ಹರಿಯಂಶದ ಪಾಲ್ । ಶರಧಿ ಮಧ್ಯದೊಳಗವತರಿಸಿದ ಸ್ವಾಮಿ ॥ ೪ ॥ ವೈರಿ ವಿನಾಶಕ ಚಾರು ಚತುರ್ಭುಜ । ಕ್ರೂರ ರೋಗ ಪರಿಹಾರಕ ಗುರುವೆ ॥ ೫ ॥ ವೇದಮೂಲಜಯ ವೈದ್ಯ ಪ್ರಚಾರಕ । ಸಾಧು ಜನಾಶ್ರಯ ಭೇದರಹಿತಪ್ರಭೋ ॥ ೬ ॥ ಅಗಣಿತವಿಕ್ರಮ ಜಗದುದ್ಧಾರನೆ । ತ್ರಿಗುಣಸ್ವರೂಪನೆ ಸುಗುಣಸಾಗರನೆ ॥ ೭ ॥ ಆಡಿಪಾಡಿ ಕೊಂಡಾಡಿ ಸ್ತುತಿಪೆನೆನ್ನ । ನೋಡಿ ದಯದಿ ಕಾಪಾಡು ಮಹಾತ್ಮನೆ ।೭॥ ಇಂದಿನಕಥೆ ಬಲು ಚಂದದಿ ನಡೆಸಲು। ತೊಂದರೆಗಳುಬರ ದಂದದಿಪಾಲಿಸು ॥ ೯ ॥

॥ಕಂದ॥

ನಾಪೇಳುವ ಹರಿಕಥೆಯೊಳು । ಲೋಪಗಳೇಸಿದ್ದರದನು ತಿದ್ದುತದಯೆಯಿಂ । ಶ್ರೀಪತಿ ಭಕ್ತರು ಮುನಿಯದೆ । ಕಾಪಾಡುವದೆನುತ ಮುಗಿವೆ ಕರಯುಗಳವನಾಂ ॥

(ತೊಹೆರಾ)

ಧರೆಯೊಳವಂತೀ ಪುರವನುಪಾಲಿಪ ಧೊರೆಧನಗುಪ್ತನೆಂಬುವನು।
ಪರಮಗುಣಾಢ್ಯನು ದಾನಧರ್ಮಗಳ ವಿರಚಿಸುತಿರುವನುತಾನು॥

॥ ವಚನ ॥

ಅವಂತೀಪುರವೆಂಬ ಒಂದು ಪಟ್ಟಣವನ್ನು ಧನಗುಪ್ತನೆಂಬ ಮಹಾ ಸುಗುಣಶಾಲಿಯಾದ ಒಬ್ಬ ದೊರೆಯು ಪರಿಪಾಲಿಸುತ್ತಾ ದಾನಧರ್ಮ ಪರೋಪಕಾರಂಗಳಂ ಮಾಡುತ್ತಾ ಇದ್ದನು.

॥ ಕಂದ ॥

ಧನಗುಪ್ತನೆಂಬ ರಾಯನು । ಗುಣಯುತನೆಂದೆನಿಸಿ ಪ್ರಜೆಯು ಪಾಲಿಸುತನಿಶಂ ॥ ವಿನಯದಿ ದೇವ ಬ್ರಾಹ್ಮಣ । ರನು ಪೂಜಿಸುತಿರ್ದು ಜಗದಿ ಕೀರ್ತಿಯುತಾಳ್ದಂ ॥

॥ ವಚನ ॥

ಆ ಧೊರೆಯು ದೇವರನ್ನೂ ಬ್ರಾಹ್ಮಣರನ್ನೂ ಪೂಜಿಸುತ್ತಾ, ಪ್ರಜೆಗಳಿಂದ ಒಳ್ಳೇ ಗುಣವಂತನೆನಿಸಿಕೊಂಡು ರಾಜ್ಯದಲ್ಲಿ ಸತ್ಕೀರ್ತಿಯಂ ಪೊಂದಿರುವಂಥಾವನಾದನು. ಹೀಗಿದ್ದಾಗ್ಯೂ,

(ತೊಹರಾ)

ಆತನು ಈಪರಿ ಭುವಿಯನ್ನಾಳುತ ನೀತಿ ತಪ್ಪದಿದ್ದಾಗ್ಯೂ ।
ಖಾತಿಗೊಂಡು ಕ್ಷಯರೋಗ ನೃಪಾಲನ ಭೀತಿಗೊಳಿಪುದಾಗಾಗ್ಯೂ ॥

॥ ವಚನ ॥

ಈ ರೀತಿಯಾಗಿ ಧನಗುಪ್ತಮಹಾರಾಯನು ಧರ್ಮ ತಪ್ಪದೆ ರಾಜ್ಯ ಪರಿಪಾಲನೆ ಮಾಡುತ್ತಾ ಇದ್ದಾಗ್ಯೂ ಆತನನ್ನು ಕ್ಷಯರೋಗವು ಪೀಡಿಸುತ್ತಾ ಇತ್ತು. ಅದಕ್ಕಾಗಿ ಆ ರಾಯನು ವೈದ್ಯರನ್ನು ಕರೆಸಿ ಕೈತೋರಲು,

॥ ಕಂದ ॥

ಇಳೆಯಾಣ್ಮನು ಕೈತೋರಲು । ಕೆಲವರು ನಿನಗುಷ್ಣವೆನುತ ಕೆಲವರು ಪಿತ್ಥಂ ॥ ಕೆಲವರು ವಾತವಿದೆನ್ನುತ । ಹಲಬರು ಬಲು ವಿಧದಿ ಪೇಳುತಿದ್ದರು ವೈದ್ಯರ್ ॥

॥ ವಚನ ॥

ಆ ಅರಸು ಕೈ ತೋರಲು ಪೊಸ ವೈದ್ಯರು ಅಯ್ಯಾ ರಾಯನೆ, ನಿನಗೆ ಬಹಳ ಉಷ್ಣ ವಾಗಿದೆ. ನಾನೇನೋ ವೊಳ್ಳೇ ವೈದ ನೇ, ಅದಕ್ಕೆ ಒಂದು

ಪೂಲಿಕೆ ಬೇಕು. ಅದು ಈ ದೇಶದಲ್ಲಿ ದೊರಕುವುದಿಲ್ಲ (ಬಾಬಾಬುರ್ಡ ಗಿರಿ) ಚಂದ್ರದ್ರೋಣಗಿರಿಗೆ ಹೋದರೆ ಅಲ್ಲಿ ಸಿಕ್ಕುವುದು. ಈಗ ಸದ್ಯಕ್ಕೆ ಹೋಗಲು ನನ್ನಿಂದ ಆಗಲಾರದು. ಇನ್ನು ಕೆಲವು ದಿನಗಳ ನಂತರ ಅನು ಕೂಲವಾದರೆ ಹೋಗಿಬರುತ್ತೇನೆ. ಆಗ್ಗೆ ಈ ರೋಗ ಹೀಗೆಯೇ ಇದ್ದರೆ ಪುನಃ ರೋಗಬರುವದಕ್ಕೆ ಮಾರ್ಗವಿಲ್ಲದೆ ಮಾಡುವಬಗೆ ನಾನು ಬಲ್ಲೆ ನೆಂದು ಒಬ್ಬ ವೈದ್ಯನು ಹೇಳಿಹೋದನು.

ಇನ್ನೊಬ್ಬನು ನೋಡಿ.

ಎಲೈ ಅರಸೇ ನಿನಗೆ ಬಹು ಪಿತ್ಥವಾಗಿದೆ. ನಾನು ತಕ್ಕ ಔಷಧ ವನ್ನು ಕೊಡುವೆನು. ಖರ್ಚಿಗೆ ೨ ರೂಪಾಯಿಗಳು ಮಾತ್ರ ಕೊಡಿ, ಸಾಕು. ಆ ರೋಗ ಹೋಗುವದಾರಿಯಾದರೂ ನೀನೇ ನೋಡುವೆಯೆನ್ನುತ್ತಾ........

ಮತ್ತೊಬ್ಬನು

ಅಯ್ಯಾ ಮಹಾರಾಯ! ನೀನು ೪ ದಿನಗಳಿಗೆ ಮುಂಚೆಯೇ ನನಗೆ ತಿಳಿಸಿದ್ದರೆ ಅದರ ಹುಟ್ಟು ಅಡಗಿಸುತ್ತಿದ್ದೆನಲ್ಲಾ! ತಕ್ಕ ಔಷಧವಿತ್ತು, ನೊನ್ನೆ ತಾನೇ ಮುಗಿದುಹೋಯಿತು. ಪುನಃ ಮಾಡಬೇಕಾದರೆ ಸ್ವಲ್ಪ ದುಬಾರಿ ಖರ್ಚು ತಗಲುವುದು. ಆದಾಗ್ಯೂ ಚಿಂತೆಯಿಲ್ಲ. ೫೦ ರೂಪಾಯಿಗಳನ್ನು ಕೊಡು. ಒಂದು ಔಷಧ ಮಾಡಿಕೊಡುತ್ತೇನೆ ಅದರಲ್ಲೇ ಗುಣವಾಗಬೇಕು ಆಗದಿದ್ದರೂ ಚಿಂತೆಯಿಲ್ಲಾ ಔಷಧವೇನೋ ಒಳ್ಳೆಯದು ಎನ್ನುತ್ತಲೂ....

ಬೇರೊಬ್ಬನು

ಅಯ್ಯಾ ಪ್ರಭೂ! ನಮ್ಮ ತಾತನು ಮಹಾ ಪಂಡಿತ. ಅವರ ಗಂಟುಗಂಟೇ ನನಗೆ ಸಿಕ್ಕಿದೆ. ಒಂದೊಂದು ಮಾತ್ರೆ ಬೇಲದಕಾಯಿ ಗಾತ್ರಕ್ಕಿಂತಲೂ ದೊಡ್ಡದಲ್ಲದೆ ಕಮ್ಮಿಯಾದ್ದಲ್ಲ. ೩೦೦ ರೂಪಾಯಿಗಳನ್ನು ಕೊಟ್ಟರೆ ನಾನೆ ನಿಲ್ಲಿಸಿಬಿಡುತ್ತೇನೆಂದು ಹೇಳಿ ರೂಪಾಯಿಗಳನ್ನು ತೆಗೆದುಕೊಂಡುಹೋಗಿ ರೋಗ ಇಂಥಾದ್ದೆಂದು ತಿಳಿಯದೆ ಹೋದನು.

॥ಕಂದ॥

ಎನಿತುಜನ ಮಿರ್ದೊಡೇಂತ । ನ್ನನುವರಿದವನೊರ್ವನಿಲ್ಲ ದಿರ್ದೊ ಡೆಶೂನ್ಯಂ ॥ ಘನತರ ಚಿಕಿತ್ಸೆಯರಿಯದೊ । ಡೆನಿ ತೌಷಧಮಿರ್ದೊಡೇನೊ ಚೊಡಾರತ್ನಾ ॥

||ವಚನ||

ಎಂಬಂತೆ ರೋಗಕ್ಕೆ ತಕ್ಕ ಔಷಧ ಕೊಡಬೇಕೆಂಬ ಬಗೆಯನ್ನರಿಯದೆ ಯಾವುದೋ ಔಷಧವನ್ನು ಕೊಡುತ್ತಾ ಬಂದರು. ಅದರಿಂದ ರೋಗವು ಮತ್ತಷ್ಟು ಜಾಸ್ತಿಯಾಯಿತೇ ಹೊರ್ತು ಗುಣವಾಗಲಿಲ್ಲ. ಪುನಃ ರಾಯನು ಪಂಡಿತರಾದವರನ್ನು ಕರೆಯಿಸಿ ಕೈತೋರಲು ಇದು ಕ್ಷಯರೋಗವೆಂದು ಹೇಳಿ, ತಮ್ಮಲ್ಲಿದ್ದ ಔಷಧಗಳನ್ನು ಕೊಟ್ಟು ಗುಣವಾಗದಿರಲು, ಅಯ್ಯಾ ರಾಯನೆ! ನೀನು ಇದಕ್ಕೆ ಜಪ ಹೋಮಾದಿಗಳನ್ನು ಮಾಡಬೇಕೆಂದು ಹೊರಟುಹೋದರು. ಯಾರ್ಯಾರು ಹ್ಯಾಗೆ ಹೇಳುವರೋ ಹಾಗೆಲ್ಲಾ ಮಾಡಿಸಿದಾಗ್ಯೂ ಗುಣವೇನೂ ಕಾಣಲಿಲ್ಲ.

||ಕಂದ||

ಧರಣೀಶನು ಕ್ಷಯರೋಗದಿ । ಪರಿಪರಿಜಪ ಹೋಮ ದೇವತಾರಾಧನೆಗಳ್ ॥ ವಿರಚಿಸಿ ಔಷಧ ಸೇವಿಸಿ । ದರು ಗುಣವಾಗದೆಯೆ ವ್ಯಥೆಯ ಪೊಂದುತಲಿರ್ದಂ ॥

||ವಚನ||

ಈ ರೀತಿಯಾಗಿ ಜಪ ಹೋಮ ದೇವತಾಪೂಜೆ ಮುಂತಾದವು ಮಾಡಿಸಿದಬೂ ಕೂಡ ಆತನ ರೋಗವು ಗುಣವಾಗಲಿಲ್ಲ.

(ಮಟ್ಟು—ಪಿಟೀಲನ್ನುಮಾತ್ರ ನುಡಿಸುತ್ತಾ)

ಈತನಮಡದಿ ಸುಶೀಲೆ । ಈಕ್ಷಿಸಲು ಕಳಾನಿಧಿಫಾಲೆ । ಅಪ್ಸರಸ್ತ್ರೀಯರ ತಾವ್ಸೋಲೆ । ಸೌಂದರ್ಯದಿ ಮೆರೆವಳಾಬಾಲೆ ॥ ಗಮನದಿರಾಜಮರಾಳೆ । ಪತಿ ಸೇವೆಯೊಳಿರುವಳಾ ವೇಳೆ । ಸನ್ಮತಿಯುತೆ ಕರುಣಾಲವಾಲೆ । ದುಸ್ಸತಿಯರ ಹೃದಯಕೆ ಶೂಲೆ ॥ ಸನ್ನುತ ಸದ್ಗುಣ ಸತ್ಯಶೀಲೆ । ಪತಿವ್ರತಧರ್ಮಕ್ಕನುಕೂಲೆ । ಧನಗುಪ್ತನರಾಣಿ ಸುಶೀಲೆ ॥

(ತೊಹರಾ)

ಪತಿಯನುಡಿಗೆ ಸತಿ ಪ್ರತಿನುಡಿಯದೆಸನ್ನುತಿಸಿಗೈವಳು ಪತಿವ್ರತೆ।
ಪತಿಯನುಡಿಗೆತಾಂ ಪ್ರತಿನುಡಿಯುತಬಲ್ ಖತಿಗೊಂಬಳೆಪತಿವ್ಯಥೆ॥

||ವಚನ||

ಪ್ರಾಣೇಶನ ಮಾತಿಗೆ ಎದುರು ನುಡಿಯದೆ ಸಂತೋಷದಿಂದ ಮಾತಿ

ನಂತೆ ನಡೆಯುವಳು ಪತಿವ್ರತೆಯು. ಹಾಗಲ್ಲದೆ ಗಂಡನ ಮಾತಿಗೆ ಪ್ರತಿ ನುಡಿಯುತ್ತಾ ಕೋಪಿಸುವಂಥವಳೇ ಪತಿಯುವ್ಯಥೆ ಎನಿಸುವಳು.

॥ಕಂದ॥

ಚಿತ್ರದಿ ಸ್ತ್ರೀರೂಪದೊಳಿಹ । ಪುಥ್ಥಳಿಯನು ನಂಬಬಾರದೆಂಬರು ಸುಜನರ್ । ಕೃತ್ರಿಮ ಗುಣಿಯರ ನಂಬಲು । ಮೃತ್ಯುವು ಬೇರಿಲ್ಲವವಳೆ ಪೃಥ್ವಿಯೊಳರಿಯಲ್ ॥

ವಚನ॥ ಶ್ರೀ ಕೃಷ್ಣಸ್ವಾಮಿಯೇ

॥ಶ್ಲೋಕ॥

ಔದುಂಬರಾಣಿ ಪುಷ್ಪಾಣಿ ಶ್ವೇತವರ್ಣಂಚವಾಯಸಂ । ಮತ್ಸ್ಯಪಾದಂ ಜಲೇದೃಷ್ಟ್ವಾ ನಾರೀಚಿತ್ತಂ ನಪಶ್ಯತಿ ॥

ಅಂದರೆ—ಅತ್ತಿಯ ಹುವ್ವನ್ನಾದರೂ, ಬಿಳಿ ಕಾಗೆಯನ್ನಾದರೂ, ಮೀನಿನ ಹೆಜ್ಜೆಗಳ ಗುರುತು ನೀರಿನಲ್ಲಿ ಬಿದ್ದಿರುವಿಕೆಯನ್ನಾದರೂ ನೋಡಬಹುದು. ಸ್ತ್ರೀಯರ ಮನಸ್ಸನ್ನು ಅರಿಯುವದಕ್ಕಾಗುವುದಿಲ್ಲವೆಂದು ಹೇಳಿರುವಲ್ಲಿ ದುಷ್ಟ ನಾರಿಯರನ್ನು ನಂಬುವದಕ್ಕಾದೀತೆ? ಹಾಗೊಂದುವೇಳೆ ನಂಬಿದರೆ ಮೃತ್ಯುದೇವತೆ ಎಲ್ಲಿರುವಳೆಂದು ಅಪೇಕ್ಷಿಸಲವಶ್ಯಕವಿಲ್ಲ. ಅವಳೇ ದೊಡ್ಡ ಮೃತ್ಯುವು.

( ಮಟ್ಟು )

ಪತಿಯಾಜ್ಞೆಯೊಳಿಲ್ಲದನಾರೀ । ದುರ್ಗುಣ ಸ್ತ್ರೀಜನ ಪರಿವಾರೀ । ದುರ್ಜನಗಳಿಗ ಸಹಕಾರೀ । ಪ್ರಾಣೇಶಹೃದಯ ಕಠಾರೀ ॥ ಪತಿಮನೆಯುವರಿಗೆ ತಾ ವೈರಿ । ಪರಜನಗಳಿಗತ್ಯುಪಕಾರಿ । ಸ್ವಂತ ಮಂದಿರಕೆ ತಾಚೋರಿ । ಪ್ರತಿನಿತ್ಯದಿ ಕಲಹಕಾರೀ । ತಿರುಗುತ್ತಿಹಳು ಕೇರಿ ಕೇರಿ । ಪುರುಷರು ತಿರುಗಾಡುವ ದಾರೀ । ನೋಡುತ್ತ ನಿಲುವಳು ಬಜಾರೀ । ಸೌಂದರ್ಯವನು ಮಿತಿಮೀರಿ । ಮಾಡುತ್ತಲು ವಿಟರಿಗೆ ತೋರಿ । ನೋಟದೊಳಿಂಗಿತವನು ಬೀರಿ । ಪರಿಹಾಸ್ಯವಗೈವ ಮಿಠಾರೀ । ಕಾರ್ಯಂಗಳೊಳತಿ ಸೋಮಾರಿ । ಭೋಜನದೊಳು ಬಲ್ವಂತಕಾರೀ । ಪತಿಬಂದರೆ ಸಿಡುಕನುತೋರಿ । ಬಿಡುಗಣ್ಣು ಬಿಡುವ ವುರಿಮಾರಿ । ಇಂಥವಳು ಬೇಗ ಪರಾರೀ । ಮಾಡದಿದ್ದರೆ ಕಷ್ಟವು ತಿಳಿದಿರೀ ॥ ಶ್ಲೋಕ ॥ ಕುಚೇಲಿನಂ ದಂತಮಲಾಪಹಾರಿ

೯೦ । ಬಹ್ವಾಶಿನಂ ನಿಷ್ಠುರವಾಕ್ಯಭಾಷಿಣಂ । ಸೂರ್ಯೋದಯೇ ಚಾಸ್ತಮ ಯೇಚಶಾಯಿನಂ । ವಿಮುಂಚತಿ ಶ್ರೀರಪಿ ಚಕ್ರಪಾಣಿನಂ ॥ ಎಂದು ಹೇಳಿರುವದು, ಆದ್ದರಿಂದ

(ರಾಗ—ಇಂಥಾ ಹೆಣ್ಣಿನ ನಾನೆಲ್ಲಿ ಕಾಣೆನು ಎಂಬಂತೆ)

ತರುಣೀ ದುರ್ಗುಣಾ ಭರಣೀ । ಮನೆಗೆಮಾರಿ ಬರುವಳಕ್ಕರೆಯಿಂದಾ ॥ ಪ ॥ ಪರಪುರುಷರೊಡನಾಡಿ ವಿರಸಮಾತುಗಳಾಡಿ । ಗರುವದಿಂದ ಲೇಕೂಡಿ ಮೆರೆಯುತಲಿರುವಂಥಾ ॥ ಅ ॥ ಲಲನೆಯುದಯಕಾಲದೊಳು ಹಾಸಿಗೆಯ ಬಿಡದೇ । ಕೊಳಕು ಬಟ್ಟೆಯೊಳ್ ಮುಖ । ತೊಳೆಯದಂದದಲೀ । ಬೆಳಗಾಯಿತೆನ್ನುವ । ಭಯವಿಲ್ಲದೆ ತಾನು ಮಲಗಿರ್ದ ಕಡೆಯಲ್ಲೆ । ಮೆಲಕು ಹಾಕುತ್ತಿರುವ ॥ ೧ ॥ ಪನ್ನಗವೇಣಿಯೆ । ಪಸಿದುಬಂದವರಿಗನ್ನ ವನೀಡೆನಲು ತನ್ನ ವಲ್ಲಭನು । ಕಣ್ಣನು ಬಿಡುತಪಲ್ । ಗಡಿದು ಘರ್ಜಿಸಿನಾ । ನಿನ್ನು ಮಾಡುವಳಲ್ಲ । ವೆನುತ ಘುಡುಘುಡಿಪ ॥ ೨ ॥ ಪರರ ಮನೆಗಳಿಗೆ । ತಿರುಗುತ್ತಾ ಬೀದಿಯೊಳ್ । ಬರುತಿರ್ಪರನು ಕಂಡು । ಬೆರಗಾಗಿ ನಿಲುತಾ । ತರಳರೊಳಾವಾಗಲೂ ಸರಸವನಾಡುತ್ತಾ । ಬೆರಸುತ್ತ ಹೊಲೆಯನ್ನು । ಪರಿಶುದ್ಧಿಯಿಲ್ಲದ ॥ ೩ ॥ ಮಂದಿರವನು ಕಸದಿಂದ ತುಂಬಿಸಿ । ಗಂಡ ತಂಡುದತಾನೊಪ್ಪ । ದಿಂದ ಯೆತ್ತಿಡದೆ । ವಿ ಂದು ಮೈಲಿಗೆಯುಟ್ಟು । ಬೆಂದು ಬೇಯದ ಮುನ್ನಾ ತಿಂದುನೋಡುತ್ತಾ ಮ । ದಾಂಧಳಾಗಿರುವಂಥ ॥ ೪ ॥ ಪತಿಯುಮಾತಿಗೆ ತಾನು । ಪ್ರತಿಯನ್ನು ನುಡಿಯುತ್ತಾ । ವ್ರತಗಳೊಳಗಾದರುವ । ವಾಸವನ್ನಿಂದದೇ । ಪತಿಭೋಜನಕೆ ಮುನ್ನೆ । ಮಿತಿಮೀರಿ ತಿನ್ನುತ್ತಾ । ಮತದ ನಡತೆ ತ್ಯಜಿಸುತ ತುಚ್ಛತಳಾದ ॥ ೫ ॥ ತಲೆಯ ಕೆದರುತ ಬಾ । ಗಿಲಿನೊಳು ನಿಲ್ಲುತ್ತಾ । ಬಲುಜನಗಳ ಮುಂದೇ । ಸುಳಿ ಸುಳಿಯುತ್ತಾ । ಕಳವನ್ನು ಮಾಡುತ್ತಾ ಕಲಹವನ ಡುತ್ತಾ । ಕಿಲಕಿಲವೆನೆ ನಕ್ಕು । ಕುಲುಕುತ್ತ ನಡೆಯುವ ॥ ೬ ॥ ಕಾಲು ಚಾಚಿಕೊಂಡು ಕುಳಿತು ಪತಿ ಬಂದರೂ । ಮೇಲಕ್ಕೇಳದೆ ಸಿಡುಕಿ । ಬಾಳಾ ಕೋಪಿಸುತಾ । ಹಾಳು ಸಂಸಾರನಾ । ಹೇಗೆ ಮಾಡಲಿಯೆಂದು । ಮೂಲುಗುತ್ತಲೆ ಕುಳಿತು । ಗೋಳಾಡುವ ಭ್ರಷ್ಟ ॥ ೭ ॥ ಒಲೆಯೊಸಕೆ ಹೊಸ್ತಿಲೊ । ರಳುಗುಂಡು ಮೊರಪೊರಕೆ । ಕುಳಿ ಬೀಸುಗಲ್ಲು ನೆರಳು ನಡುಮನೆ ಮೇಣ್ । ಕೊಳಗ

ಗಂಧದ ಕಲ್ಲುಗಳಮೇಲೆ ಕುಳಿತುತಾ । ತಲೆಯನೆರಡು ಕೈಯೊಳ್ । ತುರಿಸಿ ಕೊಳ್ಳುವದುಪ್ಪ ॥ ೮ ॥ ಉದಯಾಸ್ತಮಾನಕಾಲದಿ ನಿದ್ರೆಗೈಯುತ್ತಾ । ಸದಯವಿಲ್ಲದೆ ಪುಸಿ ಚಾಡಿಪೇಳುತ್ತಾ । ಪದವತೊಳೆಯದೆ ದೇವ । ಸದನ ಕೈ ನುಗ್ಗುತ್ತಾ । ಮದನ ಪಿತನ ಧ್ಯಾನಿಸದೆ । ಹರಟುತ್ತಿರುವ ॥ ೯ ॥

ಇಂಥಾ ಅಮ್ಮನಿರುವ ಮನೆಗೆ ದೊಡ್ಡಮ್ಮನು ಸುಮ್ಮಾನದಿಂದ ಬಂದು ನೆಮ್ಮದಿಯಾಗಿ ಕುಳಿತುಕೊಳ್ಳುವಳು.

ಧನಗುಪ್ತರಾಣಿಯಾದಳೊ ಇಂಥವರಿಗೆ ವೈರಿಯಾದವಳು, ದುರ್ಗುಣಗಳಿಗೆ ದೂರಸ್ಥಳು, ಸದ್ಗುಣಗಳಿಗೆ ಸದನಳೂ ತಾನಾಗಿ ಪತಿವ್ರತೆಯೆನಿಸಿರುವಳು.

(ರಾಗ—ತಡಿತಡಿ ಎಂಬಂತೆ)

ಪತಿವ್ರತೆ ತನ್ನ । ಪತಿಯ ಪೂಜಿಪಳೇ ॥ ಪ ॥ ಪತಿಯೆ ಸದ್ಗುರುವು । ಪತಿಯೇ ಪ್ರಾಣವು । ಪತಿಯೆ ದೈವವೆನ್ನುತಲುಪಚಾರಿಪಳೇ ॥ ೧ ॥ ಇತರ ಪುರುಷರನು । ಪಿತಸುತರೆನ್ನುತ । ಮತಿಯೊಳು ಭಾವಿಸಿ । ಪತಿಯನುತಿಸುವಳೇ ॥ ೨ ॥ ಪ್ರತಿದಿನದೊಳು ತನ್ನ । ಪತಿಯಾಣತಿಯನು । ಖತಿಗೊಳ್ಳದೆ ಸ । ಮ್ಮತಿಯೊಳು ಗೈವಳೆ ॥ ೩ ॥ ಸತತ ಮಮತೆಯೊಳು । ಪತಿಯೆ ತನಗೆ ಶ್ರೀ । ಪತಿಯೆಂದೆನ್ನುತ । ಹಿತದಿ ಸೇವಿಪಳೆ ॥ ೪ ॥ ಅತ್ತೆಮಾವಂದಿರ । ಚಿತ್ತಕೆ ಮುದವಂ । ನಿತ್ಯುಪಚರಿಸುತ । ಉತ್ತಮಳೆನಿಪಳೆ ॥ ೫ ॥ ಅತಿಥಿಯಭ್ಯಾ । ಗತರನ್ನಾದರಿಸುತಲತಿ ಸದ್ಗುಣ । ವತಿಯೆನಿಸುವಳೇ ॥ ೬ ॥ ಪತಿಯ ಮನೆಗು ತನ್ನ ಪಿತನಮನೆಗು ತಾ । ನತುಲಿತ ಕೀರ್ತಿಯ ಜೊತೆಗೊಳಿಸುವಳೇ ॥ ೭ ॥ ಇಂಥಾ ಪರಮ ಸದ್ಗುಣಾನ್ವಿತಳಾದ ಪತಿವ್ರತೆ । ಆ ಧನಗುಪ್ತನಕಾಂತೆ । ಪತಿಯರೋಗಪಂಹಾರಕೆ ಮನದೊಳು । ಸತತವು ಚಿಂತಿಪಳೂ । ವ್ರತಗಳನುಪವಾಸಂಗಳನಾಚರಿ । ಸುತ ದೇವರ ಪೂಜಿಪಳು ॥ ೮ ॥

॥ ವಚನ ॥

ಆ ಧನಗುಪ್ತಮಹಾರಾಯನ ಸತಿಯಾದ ಸುಶೀಲೆಯು ತನ್ನ ವಲ್ಲಭನಿಗೆ ಸಂಭವಿಸಿರುವ ರೋಗವು ಹೇಗೆ ಪರಿಹಾರವಾಗುವದೆಂದು ಯೋಚಿಸುತ್ತಾ ಉಪವಾಸಂಗಳು ಮಾಡಿ ವ್ರತಗಳನ್ನಾಚರಿಸುತ್ತಾ ಭಕ್ತಿಯಿಂದ

ದೇವರನ್ನು ಪೂಜಿಸುತ್ತಾ ಇರುವಂಥಾವಳಾದಳು. ಇನ್ನು ಹೆಚ್ಚು ನಿಯಮಂಗಳನ್ನು ನಡಿಸಲು ಆಕೆಗೂ ಅತಿಸಾರ ರೋಗವು ಬಾಧಿಸುತ್ತಿರುವುದು. ಆದಕಾರಣ ಯತ್ನವಿಲ್ಲದೆ ಚಿಂತಿಸುತ್ತಿರುವಳು.

॥ ಕಂದ ॥

ಈ ಧನಗುಪ್ತಗೆ ಜನಿಸಿಹ । ರೈದು ತನೂಭವರು ಸಕಲಗುಣಯುತರವರರ್ಗಳ್ ॥ ಗೈದಿಹ ಪೂರ್ವದಫಲದಿಂ । ಬಾಧಿಪುದೊಂದೊಂದು ರೋಗ ಮೇದಿನಿತಲದೊಳ್ ।

॥ ವಚನ ॥

ಈ ಧನಗುಪ್ತನೆಂಬ ದೊರೆಗೆ ೫ ಜನ ಪುತ್ರರಿರುವರು. ಅವರೆಲ್ಲರೂ ರೂಪಲಾವಣ್ಯವಂತರಾಗಿಯೂ, ಸುಗುಣಸಂಪನ್ನರಾಗಿಯೂ, ವಿದ್ಯಾಗರಿಷ್ಠರಾಗಿಯೂ ಇದ್ದರು. ಹೀಗಿದ್ದರೂ ಇವರಿಗೊ ಕೊತ ಒಬ್ಬೊಬ್ಬರಿಗೆ ಒಂದೊಂದು ರೋಗವು ಬಾಧಿಸುತ್ತಿದ್ದಕಾರಣ ಅವರೆಲ್ಲರೂ ಪೇಚಾಡುತ್ತಾ ಇದ್ದರು. ಆಗ ಧನಗುಪ್ತನು—ಹೇ ಸತೀ,

(ತೊಹರಾ)

ಆರೋಗ್ಯವಿಹೀನರು ತಾವಿದ್ದರು ಧಾರಿಣಿಯೊಳು ಸತ್ತಂತೇ ।
ಆರೋಗ್ಯವು ನಮಗಿದ್ದರೆ ಸಾಕು ನೂರು ಕೋಟ ಧನವಿದ್ದಂತೆ ॥

॥ ವಚನ ॥

ಹೇ ನಾರೀ, ರೋಗದಿಂದ ನರಳುತ್ತಿರುವವರು ಎಷ್ಟು ಐಶ್ವರ್ಯವಂತರಾಗಿದ್ದರೂ ಏನೂ ಫಲವಿಲ್ಲ, ನಮಗೆ ಧನಧಾನ್ಯ ಸಂಪತ್ತುಗಳೆಷ್ಟಿದ್ದರೇನುಫಲ! ಈ ಸಂಪತ್ತುಗಳು ಇಲ್ಲದಿದ್ದಾಗ್ಯೂ ನಾವೆಲ್ಲರೂ ಆರೋಗ್ಯವಾಗಿದ್ದರೆ ಆಗಾಗ್ಯೆ ಸಂಪಾದನೆ ಮಾಡಿಕೊಂಡು ಜೀವಿಸುತ್ತಾ ಸುಖವಾಗಿರಬಹುದು ಎನ್ನಲು, ಆ ಸುಶೀಲೆಯೂ ಹೇ ಪ್ರಾಣನಾಯಕ, ತಾವು ಹೇಳುವದೇನೋ ಸಹಜವೇ, ನಮ್ಮ ದುರದೃಷ್ಟಕ್ಕೆ ಏನು ಮಾಡುವದೆಂದು ಕಣ್ಣಿನಲ್ಲಿ ನೀರು ಸುರಿಸಲು ಪುತ್ರರು ವ್ಯಸನಪಟ್ಟಂಥವರಾದರು.

(ಮಟ್ಟು)

ಇಂತಿರ್ಪ ಕುಟುಂಬವ ನೋಡಿ । ಧನಗುಪ್ತನು ಮುಖವಂಬಾಡಿ ।
ತನ್ನ ಮನದೊಳು ಚಿಂತೆಯಗೂಡಿ । ನಮ್ಮ ರೋಗಗಳನು ಹೋಗಾಡಿ ।

ಕಾಯುವ ವೈದ್ಯರ ಈ ನಾಡಿ । ನೊಳಗೆಲ್ಲಿಯು ಕಾಣೆನು । ಕಾಡಿಗಾದರು ನಾ ಹೋಗುತಬೇಡಿ । ಕೊಂಡರೆ ಋಷಿಗಳು ಕಾಪಾಡಿ । ಕೆಳುಹುವರೇನೊ ದಯಗೂಡಿ। ಎನ್ನುತ ಮಂತ್ರಿಯ ಬರಮಾಡಿ। ಅಧಿಕಾರದಮುದ್ರೆಯ ನೀಡಿ ! ಅರಣ್ಯಕೆ ಪ್ರಯಣವಮಾಡಿ । ಎಲೆ ತೃಣಗಳೊಳ್ ರಚಿಸಿದಗೂಡಿ । ನೊಳಗಿದ್ದು ಸುತ್ತು ಹರಿದಾಡಿ । ಯಾರಿರುವರೆಂದು ಹುಡುಕಾಡಿ ಧೂಮವು ಕಾಣ್ಬರಲದನೋಡಿ ॥

॥ ವಚನ ॥

ಆ ಧನಗುಪ್ತರಾಯನು ವ್ಯಸನಪಟ್ಟಂಥಾ ಕುಟುಂಬವನ್ನು ಸಮಾಧಾನಗೊಳಿಸಿ ಅರಣ್ಯಕ್ಕೆ ಬಂದು ಅಲ್ಲೊಂದು ಪರ್ಣಮಂದಿರವನ್ನು ಕಟ್ಟಿಕೊಂಡು ವಾಸವಾಗಿದ್ದು ತಾನು ಅರಣ್ಯದಲ್ಲಿ ನಮ್ಮನ್ನು ಕಾಪಾಡುವಂತಾ ಮಹಾತ್ಮರು ದೊರೆಯುವರೇನೊ ಎನ್ನುತ್ತಾ ನೋಡುತ್ತಾ ಇರಲು ಒಂದು ಪ್ರದೇಶದಲ್ಲಿ,

॥ ಕಂದ ॥

ಹೋಮಾಗ್ನಿಧೂಮದಿಂದಂ । ಕೋಮಲ ಫಲಪುಷ್ಪ ಭರಿತ ವೃಕ್ಷಗಳಿಂದಂ । ನೇಮದ ಮುನಿಗಣದಿಂದಂ । ಪ್ರೇಮದಿ ಕಂಗೊಳಿಪ ಸ್ಥಳವ ಭೂಪತಿ ಕಂಡಂ ॥

(ಕಡಕು)

ಆಶ್ರಮವನ್ನು ನೋಡಿದಾ ಭೂಪತಿತಾ । ಋಷ್ಯಾಶ್ರಮವನ್ನು ನೋಡಿದಾ ॥ ಪ ॥ ಸ್ವಶ್ರೇಯಸದೊಳು ಸಾಧುಜನಂಗಳಿ । ಗಾಶ್ರಯವಾಗಿರು ವಧಿಕವಾದಪುಣ್ಯಾ ॥ ಅ ॥ ಎಲ್ಲಿನೋಡಿದರು ಫಲವೃಕ್ಷಂಗಳು । ಸಲ್ಲಲಿತದ ಸಸಿಲತೆಗುಲ್ಮಂಗಳು । ಪಲ್ಲವಿಸಿರುತಿಹ ತುಲಸಿವನಂಗಳು । ಅಲ್ಲಲ್ಲಿಯೆನಿರ್ಮಲದಜಲಂಗಳು । ಪಾರಿಜಾತ ಮಲ್ಲಿಗೆ ಸಂಪಿಗೆಯೂ । ವಿಸಾರಿಘಮುಘಮಿಸುವ ಗೇದಿಗೆಯೂ । ಭೂರಿಸುವಾಸನೆ ಯುಳ್ಳಪಾದರಿಯೂ । ವೈರತೊರೆದ ಖಗಮೃಗಗಳಪರಿಯೂ । ಮಿಂದುಮಡಿಯ ಮಾಡುತ್ತಿಹ ರೊಂದೆಡೆ । ಚಂದದಿವೇದವ ನೋಡುವರೊಂದೆಡೆ । ಬಂಧುರಶಾಸ್ತ್ರವ ಕೇಳುವರೊಂದೆಡೆ । ಕೆಲವರು ಪೌರಾಣಂಗಳ ಪೇಳ್ವರು । ಕೆಲವರು ಇತಿಹಾಸಂಗಳ ಕೇಳ್ವರು । ಕೆಲವರು ಮಂತ್ರಂಗಳ ಬೋಧಿಪರು । ಕೆಲವರು ಶಬ್ದಾರ್ಥವ

ಶೋಧಿಪರೂ । ಒಂದೆಡೆಯೊಳು ಹೋಮವ ಗೈಯ್ಯುವರು । ಒಂದೆಡೆಯೊಳು ಸಮಿತ್ಕುಶಗಳ ತಹರು । ಒಂದೆಡೆಯೊಳು ಯೋಗದಿ ಕುಳಿತಿಹರೂ। ಒಂದೆಡೆಯೊಳು ಜಪಗಳಮಾಡುವರು । ಇಂತು ನೋಡಿದರ ಚಿಂತೆಯು ತೊಲಗಿಪುದೆಂತೆನುತಿರೆ ಭೂ । ಕಾಂತಸಂತಸದೊ ಳಾಶ್ರಮವನ್ನು ನೋಡಿದ ॥

॥ ವಚನ ॥

ಆ ರಾಯನು ಇಂತು ಪ್ರಕಾಶಿಸುತ್ತಿರುವ ಆಶ್ರಮವನ್ನು ಕಂಡು ಸಂತೋಷಗೊಂಡು ಸವಿಾಪ ಕೈ ತಂದು ನೋಡುತ್ತಾ ನಿಂದು

॥ಕಂದ॥

ವರಋಷಿಗಳ ಮಧ್ಯದಿಭಾ । ಸ್ಕರನಂದದಿ ಪೊಳೆಯುತಿರ್ಪ ಮುನೀಂದ್ರನನಾ । ಧರಣೀಶಕಂಡು ತನ್ನಯ । ಕರಗಳ ಮುಗಿಯುತ್ತನಿಂದ ಸ್ತುತಿಸಿದನಂದು ॥

॥ವಚನ॥

ಆಶ್ರಮದಲ್ಲಿ ಅನೇಕ ಋಷಿಗಳ ಮಧ್ಯದಲ್ಲಿ । ಸೂರ್ಯನಂತೆ ಪ್ರಕಾಶಿಸುತ್ತಿರುವ ಭರದ್ವಾಜ ಮುನೀಶ್ವರನಂ ನೋಡಿ ಸಾಷ್ಟಾಂಗ ನಮಸ್ಕಾರವಂ ಮಾಡಿ ಎದ್ದು ಕೈಗಳನ್ನು ಜೋಡಿಸುತ್ತಾ ನಿಂತು ಕೊಂಡಾಡಿ

(ರಾಗ—ಹರಿಭಜನೆಯ ಸುಜನರು ಮಾಡಿ, ಎಂಬಂತೆ.)

ಬೇಡುವೆ ಮುನಿಕುಲಚಂದ್ರ ॥ ಪ ॥ ಕಾಪಾಡಬೇಕು ಗುಣಸಾಂದ್ರ॥ ಅ ॥ ಬೇಡುವೆಕರಗಳ ಜೋಡಿಸುತ್ತಸ್ತುತಿ । ಮಾಡುವೆಸ್ವಾಮಿಯತೀಂದ್ರ॥ ರೋಗಬಾಧೆಗೊಳಗಾಗಿ ನೊಂದು ಸಾ । ಕಾಗಿಬಂದೆನು ಮುನೀಂದ್ರ ॥ ೧ ॥ ಅತಿಶಯರೋಗದಿ ಸತಿಪುತ್ರರುಸಹ । ವ್ಯಥೆಪಡುವರು ಯೋಗೀಂದ್ರ ॥ ೩ ॥ ಪರಮೌಷಧದಲಿ ಪರಿಹರಕಾಣದೆ । ಮರೆಹೊಕ್ಕೆನು ದಯಾಸಾಂದ್ರ ॥ ೪ ॥ ನಿನ್ನನುನಂಬಿದೆ ಸನ್ನುತಿಮಾಡಿದೆ । ಯೆನ್ನಬಿಡದೆಮುನೀಂದ್ರ ॥ ೫ ॥ ಕಾಪಾಡಬೇಕು ಗುಣಸಾಂದ್ರ ॥

॥ವಚನ॥

ಸ್ವಾಮಿ ,ಮುನಿವರ್ಯನೆ, ನಾನು ಕುಟುಂಬ ಸಮೇತನಾಗಿ ರೋಗದಿಂ ಪೀಡಿತನಾಗಿ ಔಷಧಗಳನ್ನು ಸೇವಿಸಿದರೂ ಗುಣವಾಗಲಿಲ್ಲ. ತಮ್ಮ ಮೊರೆ ಹೊಕ್ಕಿರುವೆನು ನನ್ನನ್ನು ಕಾಪಾಡಬೇಕು.

(ತೊಹರಾ)

ನಾನಾಜಪತಪ ಹೋಮಪೂಜೆಗಳ ನೂನವಾಗಿ ಮಾಡಿಸಿದೆ ।
ಕಾಣದೆ ಗುಣವನು ಯೋಗೀಶ್ವರ ಸನ್ನಿಧಾನಕೆಬಂದುನಮಿಸಿದೆ ॥

॥ವಚನ॥

ಸ್ವಾಮಿ, ಮುನಿಸಾರ್ವಭೌಮ, ರೋಗ ಪರಿಹಾರಾರ್ಥವಾಗಿ ಜಪತಪ ಹೋಮ ಪೂಜೆಗಳನ್ನು ಸಹ ಮಾಡಿಸಿ ಯಾವದರಲ್ಲೂ ಗುಣಪೊಂದದೆ ರಾಜ್ಯಭೋಗವಂ ತ್ಯಜಿಸಿ ಅರಣ್ಯಕ್ಕೆ ಬಂದು ಯಾರಾದರೂ ಕಾಪಾಡುವರಿರುವರೇನೋ ಎಂದು ಹುಡುಕುತ್ತಾ ಬಂದು ತಮ್ಮ ಪಾದಾರವಿಂದವನ್ನು ಕಂಡೆನು.

(ಮಟ್ಟು)

ಇಂತೆಂದು ಮುನಿಗೆ ಬಲವಂದು । ಸಾಷ್ಟಾಂಗವೆರಗಿ ನೃಪನಂದು । ಕರಕಮಲವಜೋಡಿಸಿನಿಂದು । ಬಹುದಿನದಿ ರೋಗದೊಳತಿನೊಂದು । ಸಾಕಾಗಿ ಅರಣ್ಯಕೆಬಂದು । ಸಲಹುವರಾರಿರುತಿಹರೆಂದು । ಹುಡುಕುತ ಸನ್ನಿಧಿಗೈತಂದು । ತಮ್ಮದರ್ಶನಪೊಂದಿದೆನಿಂದು । ನಾಂಧನ್ಯನಾದೆನು ಮುಂದು । ಎನಗಾವರೋಗವಿಲ್ಲೆಂದು । ನಂಬಿರುವೆನು ಸದಯಾಸಿಂಧು । ಆದರೆ ಸತಿಸುತರೊಂದೊಂದು । ರೋಗದಿ ನರಳುವರಾಕುಂದು । ವೇಧಿಪುದೆನ್ನನು ನೀನಿಂದು । ಯೆನ್ನ ಮೊರೆಯನು ಚಿತ್ತಕೆತಂದು । ಸಂರಕ್ಷಿಪುದನಾಥಬಂಧು ॥

॥ ವಚನ ॥

ಸ್ವಾಮಿ, ಯತಿಕುಲಚಂದ್ರನೆ, ನನಗೆ ತಮ್ಮ ಪಾದದರ್ಶನವಾದಕೂಡಲೆ ನನ್ನ ರೋಗವೆಲ್ಲವೂ ಪರಿಹರವಾಯ್ತೆಂದು ನಂಬಿರುವೆನು. ಆದರೂ ನನ್ನ ಕುಟುಂಬಕ್ಕೆ ಆರೋಗ್ಯವುಂಟಾಗುವಂತೆ ಅನುಗ್ರಹಿಸಬೇಕು. ಎಂದು ಭರದ್ವಾಜಮುನೀಶ್ವರನನ್ನು ಪ್ರಾರ್ಥಿಸಲು ಆ ಮುನೀಶ್ವರನು

ಅಯ್ಯಾ ಭೂಪಾಲನೆ ಚಿಂತಿಸದಿರು,

ಶ್ಲೋ॥ ಪೂರ್ವಜನ್ಮಕೃತಂ ಪಾಪಂ । ವ್ಯಾಧಿರೂಪೇನಪೀಡ್ಯತೆ ॥

ಎಂದು ಹೇಳಲ್ಪಟ್ಟಿರುವದಾದ್ದರಿಂದ ಪೂರ್ವಜನ್ಮದಲ್ಲಿ ಮಾಡಿದ ಪಾಪವು ಈ ಜನ್ಮದಲ್ಲಿ ರೋಗರೂಪದಿಂದ ಪೀಡಿಸುತ್ತಿರುವುದು. ಇದಲ್ಲದೆ

ರಾಜರಿಗೆ ಪ್ರಜೆಗಳು ಮಾಡಿದ ಪಾಪಂಗಳು ಸಹಾ ಸೇರುತ್ತಿರುವುವು. ಹೇಗೆಂದರೆ, "ರಾಜಾರಾಷ್ಟ್ರಕೃತಂ ಪಾಪಂ" ಎಂದು ಹೇಳಿರುತ್ತದೆ. ಆಚಾರಃಪ್ರಥಮೋಧರ್ಮ ಎಂಬಂತೆ ಚಾತುರ್ವರ್ಣದವರು ಅವರವರ ಮತಾಚಾರಗಳಲ್ಲಿ ತಪ್ಪದೆ ನಡೆಯುತ್ತಿರುವಂತೆ ನೋಡಿಕೊಳ್ಳದಿರೋಣದ ರಿಂದಲೂ, ಪ್ರಜೆಗಳು ರಾಜನರಿಯುವಂತೆ ಗೈದ ಪಾಪಂಗಳನ್ನು ವಿಚಾರಣೆ ಯಿಂದ ನಿಲ್ಲಿಸದಿರೋಣದರಿಂದಲೂ, ಆ ಪಾಪಗಳೆಲ್ಲವು ಪ್ರಭುವಿಗೆ ಸೇರಿ ರೋಗರೂಪವಾಗಿ ಬಾಧಿಸುವುದುಂಟು. ಆದರೆ ನೀನು ಇದುವರೆಗೂ ಬಹಳ ವ್ಯಥೆಯನ್ನು ಅನುಭವಿಸಿರುತ್ತಿ. ಈಗ ನಿನಗೆ ರೋಗ ಪರಿಹರ ವಾಗುವ ಮಾರ್ಗವನ್ನು ಹೇಳುತ್ತೇನೆ. ನಾನು ನಾರದಮುನಿಯಿಂದ ಕೇ ಳಿಬಂದಿರುತ್ತೇನೆ ನೀನು ಯೋಚಿಸಬೇಡ.

॥ಕಂದ॥

ಧರಣೀಶನೆ ಚಿಂತಿಸದಿರು । ದರುಶನಮಾತ್ರದೊಳು ದುರಿತ ಭವಭಯ ಕಳೆವಾ । ಪರಮಾತ್ಮನಾದ ಧನ್ವಂ । ತರಿಯನು ಮರೆಹೊಗಲು ಸುಖವ ಪೊಂವೆನಿರುತಂ ॥

॥ವಚನ॥

ಅಯ್ಯಾ ರಾಯನೆ—ತನ್ನ ದರ್ಶನಮಾತ್ರದಿಂದ ಸಮಸ್ತ ಪಾಪಂಗ ಳಿಂದ ಕೂಡಿದ ಜನ್ಮರೋಗವನ್ನೇ ಪರಿಹರಿಸುವ ಪರಮಾತ್ಮನಾದ ಧನ್ವಂತ ರಿಯನ್ನು ನೀನು ಸೇವಿಸಿದ್ದೇ ಆದರೆ ಸುಖವನ್ನು ಪೊಂದುವದಕ್ಕೆ ಸಂ ದೇಹವಿಲ್ಲ.

(ತೂಹರಾ)

ಮರ್ಮವರಿತು ಧ್ಯಾನಿಸೆ ಪೂರ್ವಾರ್ಜಿತ ಕರ್ಮಫಲದ ರೋಗವನು ।
ನಿರ್ಮೂಲವ ಗೈಯುತ ಧನ್ವಂತರಿ ಪೆರ್ಮೆಯಿಂದ ಸಲಹುವನು ॥

॥ವಚನ॥

ಧನಗುಪ್ತನೆ—ನೀನು ಧನ್ವಂತರಿ ಸ್ವಾಮಿಯನ್ನು ಭಕ್ತಿಯಿಂದ ಶಾ ಸ್ತ್ರೋಕ್ತವಾಗಿ ಪೂಜಿಸಿದ್ದೇ ಆದರೆ ನಿನ್ನ ಪೂರ್ವಕರ್ಮ ಫಲದ ರೋಗವು ಪರಿಹಾರವಾಗುವದಲ್ಲದೆ ನಿನ್ನ ಕುಟುಂಬಕ್ಕೂ ಮೇಲುಂಟಾಗುವದು. ಆದ ಕಾರಣ ನೀನು ಶ್ರದ್ಧೆಯಿಂದ

(ರಾಗ—"ತಕ್ಕುವೇಮಿ ಮನಕು" ಎಂಬಂತೆ)

ಭಜಿಸುಮನದಿ ಘನದಿ ಧನ್ವಂತರಿ। ನಿಜಗುರುವನು ಮುದದಿ ॥ಪ॥ ಸುಜನೋದ್ಧಾರನ ಕುಜನವಿನಾಶನ। ಭಜಕರಕ್ಷಕನ ತ್ರಿಜಗವಪೊರೆವನ॥ ಅ॥ ಸ್ಮರಿಸಿದಮಾತ್ರಕೆ ದುರಿತರೋಗಗಳ। ಪರಿಹರಗೈಯುವ ಪರಮಪು ರುಷನನು ॥ ೧ ॥ ಮೊರೆಯಿಡೆ ಸುರರನು ಪೊರೆಯುವಕಾರಣ। ಶರದೊ ಳಮೃತವನು ಧರಿಸಿಬಂದವನ ॥ ೨ ॥ ಹಿತದಿಂದಾತನ ವ್ರತವನೆಸಗು ಭೂ। ಪತಿಯೆನಿನ್ನ ಕಾಮಿತಫಲ ಕೊಡುವನು ॥ ೩ ॥

॥ವಚನ॥

ಅಯ್ಯಾ ನೃಪಾಲನೆ, ನೀನು ಭಕ್ತಿಪೂರ್ವಕವಾಗಿ ಶ್ರೀಹರಿಯಂಶದೊ ಳವತರಿಸಿದ ಧನ್ವಂತರಿಯ ವ್ರತವನ್ನು ಮಾಡಿದ್ದೇ ಆದರೆ ಸಕುಟುಂಬ ನಾದ ನಿನ್ನ ರೋಗಾದಿಗಳನ್ನು ಹೋಗಲಾಡಿಸುವದಲ್ಲದೆ ನಿನ್ನ ಇಷ್ಟಾ ರ್ಥಂಗಳನ್ನು ಕೊಟ್ಟು ಸಂರಕ್ಷಿಸುವನು, ಇದಕ್ಕೇನೂ ಸಂಶಯವಿಲ್ಲ. ಎಂದು ಭರದ್ವಾಜ ಮುನೀಶ್ವರನು ಪೇಳಲು ಧನಗುಪ್ತರಾಯನು

(ತೊಹರಾ)

ಪರಮಹಂಸನೆ ಧನ್ವಂತರಿಎಂಬ ಪರಮಪುರುಷನಚರಿತೆ।
ಹರುಷದಿಕೇಳುವೆ ಕರುಣದಿಪೇಳುತ ಪರಿಹರಿಸೆನ್ನಯ ಕೊರತೆ॥

॥ವಚನ॥

ಹೇ ಮುನಿವರ್ಯನೆ, ಆ ಧನ್ವಂತರಿಯೆಂಬ ಮಹಾನುಭಾವನು ಯಾರು? ಏನುಕಾರಣ ಅವತಾರವನ್ನೆತ್ತಿದನು. ಆ ಮಹಾತ್ಮನ ಚರಿತ್ರೆಯನ್ನು ದಯ ವಿಟ್ಟು ಪೇಳುವಂಥಾವನಾಗಬೇಕು ಎನ್ನಲು ಆ ಮುನೀಶ್ವರನು

॥ಕಂದ॥

ಪೇಳುವೆ ನೃಪಕುಲ ಚಂದ್ರನೆ। ಕೇಳೈ ಸತ್ಪುಣ್ಯಚರಿತೆ ಕುಶಲದೊ ಳೀಗಲ್। ತಾಳಿದ ರೋಗಂಗಳ ನಿ। ರ್ಮೂಲವ ಗೈಯುತ್ತಸುಖದಿ ಬಾಳುವೆ ಸತತಂ॥

॥ವಚನ॥

ಅಯ್ಯಾ ಧನಗುಪ್ತನೆ, ನೀನು ಧನ್ವಂತರಿಯ ಪುಣ್ಯಚರಿತ್ರೆಯನ್ನು ಕೇಳಬೇಕೆಂದು ಅಪೇಕ್ಷಿಸುವದು ನಿನ್ನ ಪೂರ್ವಪುಣ್ಯವೇಸರಿ. ಆ ಮಹಾ ತ್ಮನ ಕಥೆಯನ್ನು ಯಥೋಕ್ತವಾಗಿ ಪೇಳುವೆನು. ಶ್ರದ್ಧಾಗರಿಷ್ಠನಾಗಿ ಕೇಳೆ

ದ್ದೇಆದರೇ ನಿನ್ನ ಸಮಸ್ತರೋಗಗಳೂ ಪರಿಹರವಾಗಲು ಸಂದೇಹವಿಲ್ಲ. ಪೂರ್ವದಲ್ಲಿ ದಿತಿಪುತ್ರರಾದ ದೈತ್ಯರಿಗೂ ಅದಿತಿಪುತ್ರರಾದ ದೇವತೆಗಳಿಗೂ ಪರಸ್ಪರವೈರದಿಂದ ಬಹಳವಾಗಿ ಯುದ್ಧನಡೆಯಿತು. ಆಗರಕ್ಕಸರು.

(ತೊಹರಾ)

ದುರುಳದಾನವರುನಿರ್ಜರನುತಾರ್ವಧುರದೊಳುಸೋಲಿಸಲಾಗಾ ।
ಸುರರುಪಲಾಯನಮಾಡುತವೇಳ್ದರು ಪರಮೇಷ್ಟಿಗೆಬಲುಬೇಗಾ ॥

॥ವಚನ॥

ಯುದ್ಧದಲ್ಲಿ ದೇವತೆಗಳನ್ನು ಸೋಲಿಸಿ ರಾಕ್ಷಸರು, ಅಮರಾವತಿ ಪಟ್ಟಣವನ್ನು ಕೊಳ್ಳೆ ಹೊಡೆದುಕೊಂಡು ಹೋದಂಥವರಾಗಲು ಸ್ವರ್ಗ ವಾಸಿಗಳೆಲ್ಲರು ಬಹಳವಾಗಿ ನೊಂದು ಬ್ರಹ್ಮನಬಳಿಗೆಬಂದು ವಂದಿಸುತ್ತಾ ನಿಂತು ದೇವೇಂದ್ರನಿಂತೆಂದನಂದು.

(ಮಟ್ಟು)

ಸುರರೊಳು ಪಿರಿಯನೆನಿೀಕೇಳು । ರಾತ್ರಿಂಚರರ ಕೈಯೊಳು । ಆದು ದುತ್ರಿದಶರಿಗತಿಸೋಲು । ಅಮರಾವತಿನಗರವಕೋಳು । ಹೊಡೆದರುತತ್ಪುರಿ ಯನುಪಾಳು । ಗೈದರು ನಮ್ಮಗಳಬಾಳು । ಹೀನರಿಗಿಂತಲುಬೀಳು । ಕೇಳು ವರಿಲ್ಲನಮ್ಮಗೋಳು । ಈಅಧಿಕಾರವೆಮಹಾಕೀಳು । ಯತಿಯಂದದೊಳಿ ರುವುದೆಮೇಲು । ದುಃಖವತಿಳುಹಿದೆವು ಕೃಪಾಳು । ನಮಗೇನುಗತಿ ಮುಂದೆಪೇಳು ॥

॥ವಚನ॥

ಇಂತೆಂದು ದೇವೇಂದ್ರಾದಿಗಳು ಮೊರೆಯಿಡಲು ಆ ಚತುರಾನನನಾದ ಬ್ರಹ್ಮನು.

॥ಕಂದ॥

ಚಿಂತಿಸದಿರಿಶ್ರೀಲಕ್ಷ್ಮೀ । ಕಾಂತನ ಬಳಗೈದಿ ನಮ್ಮಕಷ್ಟಗಳೆಲ್ಲಂ ।
ಅಂತರವಿಲ್ಲದೆಪೇಳುವ । ಕಂತುಪಿತಂಗೈದ ಪರಿಯೊಳಾಗಲಿತೆರಳೀ ॥

॥ವಚನ॥

ಹೇ ದ್ವಿವಿಜರೇ, ನೀವು ಏತಕ್ಕೆ ಚಿಂತಿಸುವಿರಿ ? ಅನಾಥೋದೈವರಕ್ಷ ಕಃ ಎಂದು ಪೇಳಿರಲಿಲ್ಲವೇ ? ಸಮಸ್ತರನ್ನು ರಕ್ಷಿಸುವವನು ಆ ಭಗವಂತ ನಲ್ಲವೆ ?

(ತೊಹರಾ)

ಇನ್ನುನಮ್ಮಸಂರಕ್ಷಪಪರಿಶ್ರೀ । ಮನ್ನಾರಾಯಣಬಲ್ಲಾ ।
ಪನ್ನಗಶಯನನಗೆಬಿನ್ನಪಗೈಯುವಬನ್ನಿರಿನೀವೆಲ್ಲಾ ॥

॥ವಚನ॥

ಹೇ. ಅಮರಪತೀ, ನೀವೆಲ್ಲರೂ ಜಾಗುಮಾಡದೆ ಬೇಗಬರುವಂಥವರಾಗಿ. ಆ ಮಹಾವಿಷ್ಣುವಿನೊಡನೆ ನಮ್ಮ ಕಷ್ಟಂಗಳಂ ಹೇಳಕೊಂಡರೆ ಆತನೇ ಕಾಪಾಡುವನು ಬೇಗಬನ್ನಿ ಬನ್ನಿ.

(ಮಟ್ಟು)

ಈರೀತಿ ಅಮರರನುಕೂಗಿ । ಕರಕೊಂಡು ಬ್ರಹ್ಮಮುಂದಾಗಿ । ಅರಣ್ಯಕೆಲ್ಲರು ಪೋಗಿ । ನಿರ್ಮಲಸ್ಥಳದೊಳು ಗುಂಪಾಗಿ । ಅರಿವರ್ಗಪತೊರೆದಯೋಗಿ । ಜನರಿಗೆ ಕಾಣದೆ ಮರೆಯಾಗಿ । ಇರುತಿರ್ಪಹರಿಗೆ ಶಿರಬಾಗಿ । ಮೊರೆಯಿಟ್ಟರೆಲ್ಲರೊಂದಾಗಿ ॥

॥ವಚನ॥

ಈರೀತಿಯಾಗಿ ಬ್ರಹ್ಮನು ದೇವತೆಗಳ ಸಹಿತ ಅರಣ್ಯಕ್ಕೆಪೋಗಿಅಲ್ಲೊಂದು ನಿರ್ಮಲವಾದ ಸ್ಥಳದಲ್ಲಿಕುಳಿತು ಕ್ಷೀರಾಬ್ಧಿಶಯನನಾದ ಶ್ರೀಮನ್ನಾರಾಯಣನನ್ನು ಧ್ಯಾನಿಸುತ್ತಾ ಉತ್ತರಾಭಿಮುಖವಾಗಿನಿಂತು ಕೈಮುಗಿದು

(ರಾಗ ಮದಗಜಗಮನಳೆಯೆಂಬಂತೆ)

ಬಾರೊಬಾರೋಹರೀ । ಕ್ಷೀರಾಬ್ಧಿವಿಹಾರೀಶೌರೀ ॥ಪ॥ ನಾರಾಯಣ ನಮ್ಮಕರುಣಾರಸದಿಂ ಪೊರೆಯುವೆ ॥ಅ॥ ಶರಣಾಗತರಾದವರ ಪರಿಪಾಲನೆಗೈವೆನೆಂಬ ಬಿರುದನ್ನುನೀ । ಧರಿಸಿರುವೆ ಮೊರೆಯುಕೇಳಿಪರಿಪಾಲಿಸೊ ॥೧॥ ಮೂರುಲೋಕಾಧಾರಿಯಾದ।ನೀರಜಾಕ್ಷನಿನ್ನಸರಿ । ಕಾರುಣಿಕರ್ಯಾರೂ । ಶುಭಾ । ಕಾರತೋರಿಸಾರುಬೇಗಾ॥೨॥ ಸ್ವಾಮಿ ಶ್ರೀಲಕ್ಷ್ಮೀಪತಿ ಕೋಮಲಾಂಗ ನೀನೇಗತಿ । ಶ್ರೀಮದೊಬ್ಯೇಗಪುರೀಶರಂ । ಧಾಮಾಭಕ್ತಪ್ರೇಮಬೇಗ ॥

॥ವಚನ॥

ಹೇ ಸ್ವಾಮಿ ಕ್ಷೀರಾಬ್ಧಿಶಯನ, ಶ್ರೀಮನ್ನಾರಾಯಣ, ಅನಾಥರಕ್ಷಕನೆಂಬ ಬಿರುದನ್ನುಧರಿಸಿರುವ ಪರಮಾತ್ಮನೆ, ನೀನು ಪ್ರತ್ಯಕ್ಷನಾಗಿಬಂದು ನಮ್ಮನ್ನು ರಕ್ಷಿಸಬೇಕು. ಎಂದು ಮೊರೆಯಿಡಲು. ಅಂದು

॥ಕಂದ॥

ಇಂತಿವರುಸ್ತುತಿಸೆ ಲಕ್ಷ್ಮೀ । ಕಾಂತನು ಸಂತೋಷಗೊಂಡುಶತ ಶತವಿದ್ಯುತ್ । ಕಾಂತಿಯೊಳೆದುರಿಗೆ ನಿಲ್ಲಲು । ಭ್ರಾಂತಿಯಗೊಳುತೆರಡು ಗಳಿಗೆ ನಿಂತರುತ್ರಿದಶರ್ ॥

॥ವಚನ॥

ಈರೀತಿಯಾಗಿ ಬ್ರಹ್ಮನೇ ಮೊದಲಾದ ಸುಮನಸರು ಶ್ರೀಮನ್ನಾರಾಯಣನನ್ನು ಸ್ತೋತ್ರವಂ ಮಾಡಲು ಶ್ರೀಹರಿಯು ಕೋಟಿಸೂರ್ಯಪ್ರಕಾಶದಿಂದ ಪ್ರತ್ಯಕ್ಷವಾಗಿ ನಿಲ್ಲಲು ಆ ತೇಜಸ್ಸನ್ನು ನೋಡಲಾರದೆ ಇವರೆಲ್ಲರೂ ಕಣ್ಣುಮುಚ್ಚಿ ದಿಗ್ಭ್ರಮೆಗೊಂಡು ನಿಶ್ಚೇಷ್ಟಿತರಾದರು.

॥ಮಟ್ಟು॥

ಅನಂತರಚೇತನಗೂಡಿ । ಶ್ರೀಕಾಂತನಸುಂದರನೋಡಿ । ಸಾಷ್ಟಾಂಗ ಪ್ರಣಾಮವಮಾಡಿ । ಉಲ್ಲಾಸದಿಂದ ಕೊಂಡಾಡಿ । ನೀಚಮರ್ಮಬೊಂಬೆಗಳ ಮಾಡಿ । ಅವುಗಳಿಗೆಲುಬುಗಳನುಹೂಡಿ । ನರಗಳಬಂಧಿಸಿಬಿಗಿಮಾಡಿ । ಜೀವಂಗಳನದರೊಳು ಕೂಡಿ । ಸುತಲವುಗಳನು ಕುಣಿದಾಡಿ । ಸುತ್ತಿಹ ಶ್ರೀಹರಿನೀಪ್ರೌಢ । ನಾವ್‍ದೈತ್ಯರೊಳು ಹೊಡೆದಾಡಿ । ಸಾಹಸಗಳೆಲ್ಲಹೋಗಾಡಿ । ಜಯವಿಲ್ಲದೆ ರಣದೊಳು ಹೇಡಿ । ಗಳಹಾಗೆ ನಾವೆಲ್ಲರೂ ಓಡಿ ಬಂದೆವಿಲ್ಲಿಗೆ ನೀದಯಗೂಡಿ । ಉದ್ಧರಿಸೆನ್ನುತ ಕೈಗಳಜೋಡಿ । ಸುತನಿಂದರು ವರವನುಬೇಡಿ । ಶ್ರೀಹರಿಯುವರನ್ನುನೋಡಿ ॥

॥ವಚನ॥

ಈರೀತಿಯಾಗಿ ದೇವತೆಗಳು ಕರಕಮಲವಂ ಮುಗಿದು ಬೇಡಿಕೊಳ್ಳಲು ಆ ಪರಮಾತ್ಮನಾದ ಶ್ರೀಮನ್ನಾರಾಯಣನು ಮೇಘಗಂಭೀರವಾದ ವಾಕ್ಯಗಳಿಂದ

(ರಾಗ ರೂಪಕ) ಕಂಗಳಿದ್ಯಾತಕೋ ಕಸ್ತೂರಿಯೆಂಬಂತೆ.

ಸುರರುಕೇಳಿರೈ ಪೇಳ್ವದ । ಹರುಷತಾಳಿರೈ ॥ಪ॥ ಪರಿಪರಿಚಿಂತನೆಗಳತೊರೆದು । ಭರದಿಕರ್ಣಗಳನು ತೆರೆದು ॥ಅ॥ ಅಸುರರದಿಂದ ಬಹಳ ನೊಂದು । ವ್ಯಸನದಿಂದ ಬಂದಿರಿಂದು । ಕುಶಲರಾಗಿ ನೀವು ಮುಂದು । ವಸಿಸುವಂಥಾ ವಾಕ್ಯದೊಂದು ॥೧॥ ಬೃಂದಾರಕರಸುರರುಗೂಡಿ । ಮಂದರ

ಗಿರಿಯು ಮಂತು ಮಾಡಿ । ಮುಂದು ವಾಸುಕಿಯು ಬೇಡಿ । ಚಂದದಿ ಹಗ್ಗಕೆ ಹಣಿಯುಮಾಡಿ ॥ ೨ ॥ ಪಾಲು ಶರಧಿಯುನ್ನು ಕಡೆದು । ಮೇಲಾದಮೃತವನ್ನು ಪಡೆದು । ಶೀಲರಾಗಿ ನೀವು ಕುಡಿದು । ಬಾಳಿರಿ ಸೌಖ್ಯವನು ತಳೆದು ॥ ೩ ॥

॥ ವಚನ ॥

ಎಲೈ ದೇವತೆಗಳಿರಾ, ನೀವು ರಾಕ್ಷಸರ ಕೂಡೆ ಸ್ನೇಹವನ್ನು ಬೆಳಸಿ ಮಂದರ ಪರ್ವತವನ್ನು ಪೆಳ್ಳಗಿಸಿ ತಂದು, ಅದನ್ನು ಮಂತುಮಾಡಿ ವಾಸುಕಿಯುನ್ನು ಬೇಡಿ ಕರೆತಂದು ಹಗ್ಗವಾಗಿ ಸುತ್ತಿ, ಹಾಲಿನ ಸಮುದ್ರವನ್ನು ಕಡೆದರೆ ಆ ಕಡಲಿನಲ್ಲಿ ಅಮೃತವುದ್ಭವಿಸುವದು. ಅದನ್ನು ಕುಡಿದದ್ದೇ ಆದರೆ ಅನಂತರ ಮರಣವಿಲ್ಲದೆ ಶೌರ್ಯಾನ್ವಿತರಾಗಿ ಸಂತೋಷದಿಂದ ಸುಖ ಪೊಂದುವಿರಿ. ನೀವುಗಳೀಕೆಲಸ ಮಾಡುವದು ಪ್ರಯಾಸ! ಮಾಡಿದ ಮೇಲುಲ್ಲಾಸ!!

(ತೊಹರಾ)

ಇಂತು ಪೇಳಿ ಶ್ರೀ ಕಾಂತೆಯರಸ ತಾನಂತರ್ಧಾನವಾದಾಗೆ ।
ಚಿಂತೆನೀಗಿ ಸುರರೆಲ್ಲರು ಪೊರಟರು ಸಂತಸದಿಂದಲೆ ಪುರಿಗೆ ।

॥ ವಚನ ॥

ಈ ರೀತಿಯಾಗಿ ಶ್ರೀಹರಿಯು ಸಮುದ್ರವಂ ಕಡೆಯುವ ವಿಧವನ್ನು ಪೇಳಿ ಅದೃಶ್ಯನಾಗಲು, ದೇವತೆಗಳೆಲ್ಲರೂ ತಮ್ಮ ಅಮರಾವತೀ ನಗರವನ್ನು ಸೇರಿ ತಮ್ಮ ಗುರುವಾದ ಬೃಹಸ್ಪತ್ಯಾಚಾರ್ಯರೊಡನೆ ಆಲೋಚಿಸಿ, ರಾಕ್ಷಸರೊಡನೆ ಸ್ನೇಹ ಬೆಳಸದಿದ್ದರೆ ನಮ್ಮ ಕಾರ್ಯ ಸಫಲವಾಗಲಾರದೆಂದು ಮುಖ್ಯರಾದವರು ಪೊರಟು ಬಂದು

॥ ಮಟ್ಟು ॥

ಅದಿತಿಸುತರು ತಾವಂದು । ದೈತ್ಯರ ಬಳಿಗೈತಂದು । ಸೋತೆವು ನಾವ್‌ಗಳು ನಿಮಗಿಂದು । ನಾವೀ ನಿಮ್ಮ ಸಹೋದರರೆಂದು । ಪ್ರಿಯವಚನಗಳಾಡುತನಿಂದು । ಇನ್ನು ನಮಗೂ ನಿಮಗೂ ಮುಂದು । ಬಲಿಚಕ್ರವರ್ತಿದೊರೆಯೆಂದು । ಆಶ್ವೈಸಿ ಕೆಲವು ದಿನ ನಿಂದು । ಬೃಹಸ್ಪತಿಯು ಬಲಿಯೊಡನೆಂದು । ಕೇಳೈಯಾಲೋಚನೆಯೊಂದು । ಮಂದರವೆಂಬ ಪರ್ವತಕಿಂದು। ವಾಸುಕಿಯು ಬೇಡಿ ಕರೆತಂದು । ಸುತ್ತುತ ನಾವೀ ಪಯಸ್ಸಿಂಧು । ಕಡೆ

ಯಲು ಅಮೃತವದೊಂದು | ಜನಿಪುದು ಕುಡಿದವರೆಂದೆಂದು | ಸಾವಿಲ್ಲದಿರುವರೆಂದೆಂದು | ಶ್ರೀ ಹರಿ ಜಾ ಪೇಳಿಹನೆಂದು | ತಿಳುಹಲು ಬಲಿ ಚಿತ್ತಕೆ ತಂದು | ಅಸುರರ ಸಂತೈಸಿದನಂದು ||

|| ವಚನ ||

ಈ ರೀತಿಯಾಗಿ ದೇವತೆಗಳು ರಾಕ್ಷಸರೊಡನೆ ಸ್ನೇಹವಂ ಬೆಳಸಿ, ಬಲಿಚಕ್ರವರ್ತಿಗೆ ವಿಧೇಯರಾಗಿದ್ದು, ಒಂದುದಿನ ದೇವಗುರುವು ಬಲಿಚಕ್ರವರ್ತಿಯೊಡನೆ ಸಲ್ಲಾಪಿಸುತ್ತಾ, ರಹಸ್ಯವಾದ ಒಂದಾಲೋಚನೆಯಿರುವುದು ಅದೇನಂದರೆ:—ಮಂದರಾದ್ರಿಯನ್ನು ಮಂತು ಮಾಡಿ, ವಾಸುಕಿಯನ್ನು ಹಗ್ಗವಾಗಿ ಸುತ್ತಿ ಕ್ಷೀರಸಮುದ್ರವನ್ನು ಕಡೆದರೆ ಅಮೃತ ಜನಿಸುವುದು. ಅದನ್ನು ಕುಡಿದವರಿಗೆ ಎಂದಿಗೂ ಮರಣವಿಲ್ಲವೆಂದು ಶ್ರೀಹರಿ ಪೇಳಿರುವನು. ನಾವು ಹಾಗೆ ಮಾಡಿದರೆ ಎಂದೆಂದಿಗೂ ಕುಂದಿಲ್ಲದ ಆನಂದದಿಂದಿರಬಹುದೆಂದು ಪೇಳಲು, ಬಲಿಚಕ್ರವರ್ತಿಯು ಇದು ಸರಿಯಹುದೆಂದು ಮನಸ್ಸಿಗೆ ತಂದು ರಕ್ಕಸರನ್ನು ಸಮಾಧಾನಗೈದನಂದು,

|| ಸೀಸಪದ್ಯ ||

ದಿವಿಜದೈತ್ಯರು ಸೇರಿ | ತವಕದಿಂದಲೆ ಪೊರಟು | ಮಂದರಾದ್ರಿಯ ಬಳಿಗೆ ಬಂದು ನಿಂದು | ಸುತ್ತಲಗೆಯುತ್ತ ತಾ ವೆತ್ತಿ ಮೇಲಕ್ಕದನು | ಪೊತ್ತು ತರುತಿರೆ ಕುಸಿದು ಬಿತ್ತುಗಿರಿಯು | ಕೆಲರಳಿದು ಕೆಲರೋಡಿ | ಕೆಲರು ಗಾಯದೊಳುಳಿದು ಭಯಗೊಂಡು | ಶ್ರೀಹರಿಯ ಬೇಡಿಕೊಳಲು | ಹರಿ ಗರುಡನನ್ನೇರಿ | ಹರುಷದಿಂದೈತಂದು | ಕರುಣದಿಂದೀಕ್ಷಿಸಿ ಕುಶಲವಿತ್ತು | ಭರದಿ ಶೈಲವಪಕ್ಷಿ ಮೇಲಿರಿಸಿಕೊಂಡು | ಸುರರ ದೈತ್ಯರನೆಲ್ಲರು ಕರೆದುಕೊಂಡು | ಪೊರಟು ಸುಲಭದಿ ಕ್ಷೀರಾಬ್ಧಿ ದಡಕೆ ಬಂದು | ಗಿರಿಯ ನಿಳುಹಿದನಲ್ಲಿ ಕಾರುಣ್ಯಸಿಂಧು ||

|| ವಚನ ||

ಈರೀತಿಯಾಗಿ ದೇವತೆಗಳೂ ರಾಕ್ಷಸರೂ ಇನ್ನೂ ಅನೇಕರು ಸೇರಿ ಗುಂಪು ಪೊರಟು ಮಂದರ ಪರ್ವತವನ್ನು ಗುದ್ದಲಿಗಳಿಂದ ಅಗೆದು ಗಡಾರೆಗಳಿಂದ ಮೀಟಿ, ಪೆಳ್ಳಗಿಸಿ, ಎಲ್ಲರೂ ಒಟ್ಟಾಗಿ ಹೂಂಕಾರಗಳನ್ನು ಮಾಡುತ್ತಾ ಮೇಲಕ್ಕೆತ್ತಿ ಪೊತ್ತುಕೊಂಡು, ಮೆಲ್ಲಮೆಲ್ಲನೆ ತಪ್ಪು ಹೆಜ್ಜೆಗಳನ್ನಿಡು

ತ್ತಾ, ಭಾರ ಬಹಳವಾಗಿರುವುದು. ಭದ್ರವಾಗಿ ಪೊತ್ತುಕೊಳ್ಳಿರೆಂದು ಕೂಗುತ್ತಾ, ನಾವು ಹೊರಲಾರೆವೆಂದು ಚೀರುತ್ತಾ ಇರಲು, ಭಾರದಿಂದ ಆ ಪರ್ವತವು ಕುಸಿದು ಬಿದ್ದಂಥಾದ್ದಾಯಿತು. ಆಗ ಅದರ ಕೆಳಗೆ ಕೆಲವರು ಸಿಕ್ಕಿ ಮೃತಪಟ್ಟರು. ಕೆಲವರು ಘಾಯಪೊಂದುತ್ತಾ, ನಾವೇತಕ್ಕೆ ಇಲ್ಲಿಗೆ ಬಂದೆವು? ಪ್ರಾಣವಿದ್ದರಲ್ಲವೇ ಸಮುದ್ರವನ್ನು ಕಡೆಯುವುದು, ಪಡೆಯುವುದು, ಕುಡಿಯುವುದು. ಅಮೃತವೂ ಬೇಡ, ಸಾಯಲೂಬೇಡ. ಶ್ರೀ ಹರಿಯೇ, ನಮ್ಮ ಅಣ್ಣ, ನಮ್ಮ ಮಾವ, ನಮ್ಮ ಚಿಕ್ಕಪ್ಪ ಇವರು ಈ ಪರ್ವತದ ಕೆಳಗೆ ಸಿಕ್ಕಿ ಸತ್ತು ಹೋದರು. ನನಗೆ ಕೈ ಮುರಿಯಿತು, ನನಗೆ ಕಾಲು ಮುರಿಯಿತು, ನನ್ನ ಮೈಯೆಲ್ಲಾ ಜಜ್ಜು ಗಾಯವಾಗಿದೆ, ನೀನು ಈ ಸಮಯದಲ್ಲಿ ಕಾಪಾಡದಿದ್ದರೆ ಯತ್ನವಿಲ್ಲವಪ್ಪ. ಸಂರಕ್ಷಿಸು ಎಂದು ಮೊರೆಯಿಡಲು ಆಗ ಶ್ರೀಮನ್ನಾರಾಯಣನು ಗರುಡಾರೂಢನಾಗಿ ಬಂದು, ಕರುಣಾದೃಷ್ಟಿಯಿಂದೆಲ್ಲರನ್ನೂ ಎಬ್ಬಿಸಿ, ಮಂದರಗಿರಿಯನ್ನು ಕಂದುಕದಂತೆ ಎತ್ತಿ ಪಕ್ಷಿಯ ಮೇಲಿಟ್ಟುಕೊಂಡು ಎಲ್ಲರಂ ಕರೆದುಕೊಂಡು ಕ್ಷೀರಾಬ್ಧಿಯ ತಡಿಗೆ ಬಂದು, ಪರ್ವತವನ್ನಿಳುಹಿ, ನೀವು ಆ ವಾಸುಕಿಯನ್ನು ಕರೆತಂದು ಅದ್ರಿಗೆ ಸುತ್ತಿ ಕಡೆಯಿರೆಂದು ಪೇಳಲು ದೇವತಾ ಮುಖ್ಯರು ವಾಸುಕಿಯ ಬಳಿಗೆ ಪೋಗಿ ವಿನಯವಾದ ಮಾತುಗಳನ್ನಾಡಿ ಬೇಡಿ,

(ತೋಹರಾ)

ಆಸೆಗೊಳಿಸಿ ಸಂತೈಸಿ ವಾಸುಕಿಯ ಲೇಸಿನಿಂದ ಕರೆತಂದು ।
ಭಾಸುರಾದ್ರಿಗದ ಸುತ್ತಿದರಂದು ಜೈಸಿದೆವಿನ್ನೇನೆಂದು ।

॥ ವಚನ ॥

ಅಯ್ಯಾ, ವಾಸುಕಿ, ಈಗ ನಾವು ಮಾಡಿರುವ ಆಲೋಚನೆಯನ್ನು ಬಲ್ಲೆಯಾ? ಪಾಲು ಸಮುದ್ರವನ್ನು ಕಡೆದರೆ ಅಮೃತವು ಪುಟ್ಟುವುದು. ಅದನ್ನು ಕುಡಿದವರಿಗೆ ಎಂದಿಗೂ ಸಾವಿಲ್ಲ, ಇದಕ್ಕೆ ನೀನು ಮುಖ್ಯವಾಗಿ ಸಹಾಯ ಮಾಡಬೇಕು. ಅಮೃತದಲ್ಲಿ ಮೊದಲು ಭಾಗ ನಿನಗೆ ಕೊಡುವೆವೆಂದು ಪೇಳಲು ಆ ವಾಸುಕಿಯು ಒಪ್ಪಿದಂಥವನಾದನು. ಆಗ ವಾಸುಕಿಯನ್ನು ಕರೆತಂದು ಪರ್ವತಕ್ಕೆ ಸುತ್ತಿ ಇನ್ನು ಅಮೃತವನ್ನು ಕುಡಿಯುವೆವೆಂದು ನಿಶ್ಚಯಿಸಿ ಸಂತೋಷದಿಂದ ಕಡೆಯುವ ಪ್ರಯತ್ನಮಾಡಲು,

॥ ಕಂದ ॥

ಹರಿಯುಮರರು ನಾಗೇಂದ್ರನ । ಶಿರಗಳ ಪಿಡಿಯುತ್ತ ನಿಲ್ಲೆ ಶೂರರ್‍ಸುರರೊಳ್ ॥ ಪಿರಿಯರು ಪುಚ್ಛವಪಿಡಿಯೆವು । ಶಿರಗಳ ಬಿಡಿರೆಂದು ಪಿಡಿದರಾರಾತ್ರಿಚರರ್ ॥

॥ ವಚನ ॥

ಇಂತು ಕಡೆಯುವ ಪ್ರಯತ್ನಮಾಡಲು ಶ್ರೀಹರಿಯು ದೇವತೆಗಳೊಡನೆ ಕಡೆಯುವಾಗ ಸರ್ಪರಾಜನ ಹೆಡೆಗಳ ಕಡೆ ಪಿಡಿದರೆ ಅದು ಘೋರವಿಷವನ್ನು ಕಾರುವುದು. ಅದರ ಜ್ವಾಲೆಗೆ ನೀವು ತಡೆಯಲಾರಿರಿ ಈಗ ಸದ್ಯಕ್ಕೆ ನಾವೇ ಶಿರಗಳ ಕಡೆ ಪಿಡಿಯುವ, ಅವರು ಕೇಳಿದಕೂಡಲೆ ಬಿಟ್ಟುಬಿಡುವ, ಬನ್ನಿರೆಂದು ಶ್ರೀಹರಿಯು ರಹಸ್ಯವಾಗಿ ಪೇಳಿ ಹೆಡೆಗಳ ಕಡೆ ಪಿಡಿದು ನಿಲ್ಲಲು, ಆಗ ರಕ್ಕಸರು ಕಕ್ಕಸದಿಂದ, ಆಹಾ! ನಾವು ಪೂರ್ವದೇವತೆಗಳು, ನಿಮ್ಮಗಳಿಗೆಲ್ಲಾ ಶ್ರೇಷ್ಠರು, ಬಹಳ ಶೂರರಾದವರು. ನಾವಾಗಿ ತುಚ್ಛವಾದ ಪುಚ್ಛವನ್ನು ಪಿಡಿಯಲಾರೆವು, ಹೆಡೆಗಳನ್ನು ಬಿಡಿಬಿಡಿರೆಂದು ಬಿಡಿಸಿಕೊಂಡು ಪಿಡಿದಂಥವರಾದರು.

॥ ಕಂದ ॥

ಪಿಡಿದಾಗ ದೇವದೈತ್ಯರು । ಕಡಲೊಳು ಪರ್ವತವನಿಟ್ಟು ಪೇರ್ವಾಶಿಯೊಳುಂ ॥ ದಡದಡ ಶಬ್ದವು ವೊಳಗಲ್ । ಕಡೆದರು ಕೆಡುಸಡಗರದೊಳು ಪಾಲಿನ ಕಡಲಂ ॥

॥ ವಚನ ॥

ಈರೀತಿಯಾಗಿ ದೇವದೈತ್ಯರು ಕ್ಷೀರಸಮುದ್ರವನ್ನು ಕಡೆಯುತ್ತಿರಲು ಆ ಸಮುದ್ರದಲ್ಲಿರುವ ಜಲಚರಂಗಳೆಲ್ಲಾ ಭೀತಿಗೊಂಡು ಪಾತಾಳಕ್ಕೆ ಪೋದವೋ ಎಂಬಂತೆ ಅಡಿಯಲ್ಲಿ ಅಡಗಿಕೊಂಡವು. ಹಂಸ, ಕ್ರೌಂಚ, ಚಕೋರ, ಜಲಕುಕ್ಕುಟಂಗಳೆಲ್ಲವೂ ಪ್ರಾಣಭೀತಿಯಿಂದ ಪಾರಿಪೋದಂಥಾದ್ದಾದುವು. ಸಮುದ್ರದಲ್ಲಿ ಕಡೆಯುವ ಬಿರುಬಿನಿಂದ ನೊರೆಗಳೆದ್ದು ತುಂತುರುಗಳು ಮೇಲಕ್ಕೆ ಹಾರುತ್ತಿದ್ದವು.

(ಮಟ್ಟು)

ಇಂತುಸುರಾಸುರರು ಗೂಡಿ । ತಾಮಸಗುಣಗಳ ಹೋಗಾಡಿ । ಪಂ

ತಗಳೊಬ್ಬೊಬ್ಬರು ಮಾಡಿ । ಪೇರ್ವಾಶಿಗಳನು ಕೊಂಡಾಡಿ । ಶೌರ್ಯದನುಡಿಗಳನೆರಚಾಡಿ । ಹುರಿಮಾಡಿ ಮೀಸೆಗಳ ತೀಡಿ । ಭುಜಗಳನೆಡಬಲ ಹೊಯ್ದಾಡಿ । ಹಿಗ್ಗುತ ಜಗ್ಗುತ ನಲಿದಾಡಿ । ಯೆಡಬಲದ ಕೈಗಳನು ಶಾಡಿ । ಸುತ ತಿರುಹುತ್ತಿರಲತಿರೂಡಿ । ವಾಸುಕಿ ನೋಯುತ ಪೇಚಾಡಿ । ಬಿಡಿಬಿಡಿರೆನ್ನುತ ಕೂಗಾಡಿ । ಕಾರಿದ ವಿಷಸಂತತಿಗೂಡಿ । ಬಿದ್ದರುತಜ್ವಾಲೆಗೆ ಬಾರಿ । ಹರಿಯೆಬ್ಬಿಸಿದನು ದಯಗೂಡಿ ॥

(ತೊಹರಾ)

ಬಿಡಿಬಿಡಿರೆನ್ನುತ ವಾಸುಕಿ ವಿಷವಂ ತಡೆಯದೆ ಕಾರಿದನಾಗಳ್ ।
ಗಡುಸು ರಕ್ಕಸರು ನೊಂದು ಚೇತರಿಸೆ ಕಡೆಯುತಿದ್ದರತಿ ಭರದೊಳ್ ॥

॥ ವಚನ ॥

ಇಂತು ಕಡೆಯುತ್ತಿರುವ ಕಾಲದಲ್ಲಿ ವಾಸುಕಿಯು ಸಂಕಟಗೊಂಡು ಬಿಡಿಬಿಡಿರೆಂದು ಕೂಗಿದರೂ ಬಿಡದಿರಲು ವಿಷವನ್ನು ಕಾರಿದಂತವನಾದನು. ಆ ವಿಷಜ್ವಾಲೆಯಿಂದ ದೇವದೈತ್ಯರು ಕೆಲವರು ನೆಲಕ್ಕೆ ಬಿದ್ದು ಮೂರ್ಛೆ ಹೋದರು. ಶ್ರೀ ಹರಿಯು ಕರುಣೆಯಿಂದ ಎಬ್ಬಿಸಿದಂತವನಾದನು. ಪುನಃ ಹುರಿಮಾಡಿ ಉರಗನಂ ಪಿಡಿದು ಕಡೆಯುತ್ತಿದ್ದರು.

॥ ಕಂದ ॥

ಸರಭಸದೊಳಿಂತು ಕಡೆಯು । ತ್ತಿರೆ ಭಾರಕೆಫಣಿಯು ಪಿಡಿದ ಕರಗಳು ಜಾರಲ್ ॥ ಗಿರಿಕುಸಿದು ವಾಸುಕಿಯು ಸಹ । ಭರದಿಂ ಮುಳುಗಿದುದು ಕ್ಷೀರಶರಧಿಯೊಳಾಗಳ್ ॥

॥ ವಚನ ॥

ಈ ರೀತಿ ಕಡೆಯುತ್ತಿರಲು ಪರ್ವತದ ಭಾರದಿಂದಲೂ, ಸರ್ಪದ ನುಣುಪಿನಿಂದಲೂ ಕೈಗಳಿಂದ ಜಾರಿದಂಥಾದ್ದಾಯಿತು. ಪರ್ವತವು ಸರ್ಪದ ಸಹಿತ ಸಮುದ್ರದಲ್ಲಿ ಮುಳುಗಿದಂಥಾದ್ದಾಯಿತು.

(ತೊಹರಾ)

ಜಡಿದು ಶೈಲವದು ಕಡಲೊಳು ಮುಣುಗಲು ಪಿಡಿದಿದ್ದಸುರರು ಸುರರು ।
ತಡೆಯದಂದದಲಿ ಪೊಡವಿಗೆ ಕೆಲವರು ಜಡಧಿಗೆ ಕೆಲಕೆಲರುರುಳಿದರೂ ॥

॥ ವಚನ ॥

ಈ ರೀತಿಯಾಗಿ ಪರ್ವತವು ಜರಿದು ಸಮುದ್ರದಲ್ಲಿ ಮುಳುಗಲು ಕೆಲವರು ದಡದಲ್ಲಿಯೂ ಕೆಲವರು ಸಮುದ್ರದಲ್ಲಿಯೂ ಬಿದ್ದು ಎದ್ದು ಚೇತರಿಸಿಕೊಂಡು ಪರ್ವತವೇ ಮುಳುಗಿ ಹೋಯಿತಲ್ಲಾ! ಮುಂದೇನು ಮಾಡುವದೆಂದು ಚಿಂತಿಸುತ್ತಾ ಅಸಾಧ್ಯವಾದ ಕೆಲಸವನ್ನು ಮಾಡಿದರೆ ಅದು ಆದೀತೆ! ಎನ್ನುತ್ತಾ ಕೆಲವರು ಈ ಕಷ್ಟವೂ ಬೇಡ. ಅಮೃತವೂ ಬೇಡ. ಎಲ್ಲಿಯಾದರೂ ಸುಖವಾಗಿ ಕಾಲಹರಣ ಮಾಡುವ. ಎನ್ನುತ್ತಲೂ ಕೆಲವರು ದೇವತೆಗಳು ಶ್ರೀಹರಿಗೆ ಕರಂಗಳಂ ಜೋಡಿಸಿ,

॥ ಮಟ್ಟು ॥

ಶ್ರೀರಮಾ ರಮಣೀ ಮನೋಹರಾ । ನಿನ್ನಾಜ್ಞೆಯನು ನಾವ್ವಿಾರ । ದಂದದಿ ಕಡೆಯುತ್ತಿರೆ ಪಾರಾ । ವಾರದಿ ಮುಳುಗಿತು ಗಿರಿ ತೋರ । ದಾದುದು ನಮಗಮೃತ ವಿಚಾರ । ಕಾಯ್ವರ ಕಾಣೆವು ಮತ್ತಾರ । ನಾವ್ ಬೇಡೆವು ಬೇರಿನ್ನಾರಾ । ನೀನೊರ್ವನೆ ನಮಗಾಧಾರ । ನೀ ಕರುಣಿಸು ಸದಯಾಪೂರಾ ॥

॥ ವಚನ ॥

ಹೇ ಸ್ವಾಮಿ, ನಿನ್ನಾಜ್ಞೆಯಂತೆ ಸಮುದ್ರವನ್ನು ಕಡೆಯುತ್ತಿದ್ದೆವು. ಸಮುದ್ರದಲ್ಲಿ ಪರ್ವತವು ಮುಳುಗಿ ಹೋಯಿತು. ನೀನಲ್ಲದೆ ನಮಗಿನ್ನೊಬ್ಬರೂ ದಿಕ್ಕಿಲ್ಲ. ನೀನೆ ರಕ್ಷಿಸಬೇಕೆಂದು ಮೊರೆಯಿಡಲು ಶ್ರೀ ಹರಿಯು ಚಿತ್ತಕ್ಕೆ ತಂದು,

(ರಾಗ—ಅರೆಲೆಸುಂದರಿ ಎಂಬಂತೆ)

ಸಾರಸಾಕ್ಷ ಕೂರ್ಮನ । ತಾರವನೆತ್ತಿದ ॥ ಪ ॥ ವಿಾರಿ ಬ್ರಹ್ಮಾಂಡವನಾ । ಹಾರಿಪ ವದನದಿಂದ ॥ ಅ ॥ ಈಕ್ಷಿಸೆ ವಿಶಾಲದಿ । ಲಕ್ಷಯೋಜನವೆನ್ನು । ಕುಕ್ಷಿಯೊಳ್ ಸಕಲಲೋಕ । ಭಕ್ಷಣೆಮಾಳ್ಪುದೆನೆ ॥ ೧ ॥ ಹದಿನಾಲ್ಕು ಲೋಕಕಿನ್ನು । ಹದಿನಾಲ್ಕುಲೋಕ ಕೂಡಿ । ಮುದದಿ ಮೇಲೆ ಬಿದ್ದರು । ಕದಲದ ಪದಗಳಿಂದ ॥ ೨ ॥ ಹರವಿರಿಂಚಾದಿಗಳು । ಬೆರಗಾಗಿ ಸ್ತುತಿಸಲು । ಸುರರಿಗೋಸ್ಕರ ಕ್ಷೀರ । ಶರಧಿಯ ಮಧ್ಯದಿ ॥ ೩ ॥

॥ ವಚನ ॥

ಈ ರೀತಿಯಾಗಿ ಶ್ರೀಹರಿ ಬ್ರಹ್ಮಾಂಡವೆಲ್ಲವನ್ನೂ ಆಹಾರಗೊಳ್ಳುವಂಥಾಬಾಯಿಂದಲೂ, ಲಕ್ಷಗಾವುದ್ದವುಳ್ಳ ಬೆನ್ನು ಚಿಪ್ಪಿನಿಂದಲೂ, ಅತಿವಿಶಾಲವಾದ ವಕ್ಷಸ್ಥಳದಿಂದಲೂ, ಸಮಸ್ತ ಲೋಕಂಗಳೆಲ್ಲ ಪೊಂದಾಗಿ ಮೇಲೆ ಬಿದ್ದಾಗ್ಯೂ ಕದಲದಂಥಾ ಪಾದಗಳಿಂದಲೂ ಬ್ರಹ್ಮರುದ್ರಾದಿಗಳು ಆಶ್ಚರ್ಯಪೊಂದುತ್ತಿರಲು ಕೂರ್ಮಾವತಾರವನ್ನೆತ್ತಿದಂಥವನಾದನು. ಈತನೇ ಸಮಸ್ತಲೋಕಂಗಳನ್ನು ಧರಿಸಿರುವ ದೇವನು. ಸಕಲವನ್ನು ತನ್ನಲ್ಲಿಟ್ಟುಕೊಂಡಿರುವ ಮಹಾನುಭಾವನು.

॥ ಕಂದ ॥

ನಳಿನಾಕ್ಷಕಮಠರೂಪದಿ । ಘಳಿಲನೆವಾಸುಕಿಯುಸಹಿತಘನಪರ್ವತವಂ ।
ಸುಲಭದೊಳೆತ್ತಲು ದಿವಿಜರು । ಭಳಿಭಳಿರೆನ್ನುತ್ತಹರಿಯಪೊಗಳಿದರೆಲ್ಲರ್ ॥

॥ ವಚನ ॥

ಈರೀತಿಯಾಗಿ ಶ್ರೀಮನ್ನಾರಾಯಣನು ಪರ್ವತವನ್ನು ಸರ್ಪರಾಜನ ಸಹಿತ ಮೇಲಕ್ಕೆ ಸುಲಭವಾಗಿಯೆತ್ತಲು ದೇವ ದೈತ್ಯರೆಲ್ಲರೂ ಶ್ರೀಹರಿಯನ್ನು ಬಹಳವಾಗಿ ಸ್ತೋತ್ರಮಾಡಿ ಪುನಃ ಕಡೆಯಲುಪಕ್ರಮಿಸಿದಂಥವರಾದರು.

॥ ಕಂದ ॥

ಕಡೆಯುವರೊಳುತಾನಿರುವನು । ಕಡುಮಮತೆಯೊಳಹಿಗೆ ಬಲವ ಕೊಟ್ಟಿರುವನು ಮೇಣ್ । ಕಡಲೊಳುಗಿರಿಪೊತ್ತಿಹಪಾ । ಲ್ಗಡಲೊಳ್ಶಯನಿಪನಮಹಿಮೆ ಬಲ್ಲವರಾರೈ॥

॥ ವಚನ ॥

ಇಂತು ಶ್ರೀಹರಿಯು ಕಡೆಯುವವರಲ್ಲಿ ತಾನಿದ್ದುಕೊಂಡು ಕಡೆಯುವ ವಿಧಾನವಂ ಪೇಳುತ್ತಾ, ವಾಸುಕಿಗೆ ತನ್ನ ಬಲವಂ ಕೊಟ್ಟು, ತತ್ಪರ್ವತವನ್ನು ಕೂರ್ಮರೂಪದಿಂದ ಮೇಲಕ್ಕೆತ್ತಿ, ಅದರಡಿಗೆ ಈದುರಾಗಿನಿಂತು ಮೇಲಕ್ಕೆ ಬಂದ ಶೈಲವನಂಡು ಭಳಿಭಳಿರೆಂದು ಕೈಚಪ್ಪಾಳೆ ಹೊಡೆಯುತ್ತಾ ಹೊಗಳುತ್ತಾ ಇನ್ನು ಶೀಘ್ರವಾಗಿಯೇ ಅಮೃತವು ಜನಿಸುವುದು ಕಡೆಯುವ ಬನ್ನಿರೆಂದು ಪೇಳುತ್ತಿರುವ ಫುಲ್ಲನಾಭನಾ ಮಹಿಮೆಯನು ಬಲ್ಲವರೇ ಬಲ್ಲ

ರಲ್ಲದೆ ಎಲ್ಲರಿಗೂ ತಿಳಿಯಲಾರದು. ಆಗ ಸುರಾಸುರರು ಅತ್ಯಂತ ಸಂತೋಷದಿಂದ ಎರಡು ಕಡೆಯೊಳ್ ಪಿಡಿದು,

(ರಾಗ—ಆದಿತಾಳ)

ಕಡೆದರತ್ಯಂತ ಮೋದದಿ । ಪಾಲ್ಗಡಲಸಡಗರದಿ ॥ಪ॥ ಬಿಡದೆಅಮೃತವನು । ಪಡೆಯುವೆವೆನುತಿ । ಕಡೆಯ ನಿಂತು ಪಿಡಿ । ದೆಡೆಬಿಡದಂದದಿ ॥ಅ॥ ಗಿರಿಶರಧಿಯೊಳತಿ । ಬಿರಬಿರತಿರುಗುತ । ಲಿರುತಿರೆ ನೊರೆಯುತ ಬರುತಿಹ ಪರಿಪರಿ । ತೆರೆಗಳೊಡೆದು ವಿ। ಸ್ಫುರಿತದಿ ತುಂತುರು । ನೊರೆಗಳೆರಚುತಿರೆ ಸರಭಸದಿಂದಲಿ ॥ ೧ ॥ ಕರೆಯುತ ಕುರಿಯುತ । ಜರೆಯುತ ಮೆರೆಯುತ । ಬೆರೆಯುತ ತಿರುಹುತಲಿರುತಿರೆ ಶರಧಿಯು ॥ ವರಝುಷ ಕಮಠಮಕರ ಜಲಚರಗಳು । ಕರೆಕರೆಗೊಳ್ಳುತ । ಪರಿದೋಡುತ್ತಿರೆ ॥ ೨ ॥ ಜಡಧಿಯ ನಡುವೆಡೆ । ಕಡೆಯದೆ ಅಡಿಗಡಿ । ಗೆಡಬಲ ಧಡಧಡ ಘಡಿಸುತ ಪರ್ವತ । ಫಡಫಡ ಜಡಿವುದು । ಬಿಡದಿರಿ ಬಿಡದಿರಿ । ಕಡು ದೃಢದಿಂದಲಿ । ಪಿಡಿಪಿಡಿಯೆನ್ನುತ ॥ ೩ ॥

॥ ವಚನ ॥

ಈರೀತಿಯಾಗಿ ಪಾಲ್ಗಡಲನ್ನು ಕಡೆಯುತ್ತಾ ಅಮೃತವು ಯಾವಾಗ ಪುಟ್ಟುವುದೋ ಎಂದು ಎದುರೆದುರು ನೋಡುತ್ತಾ ಇನ್ನು ಎಷ್ಟುಹೊತ್ತು ಕಡೆಯಬೇಕೆಂದು ಶ್ರೀಹರಿಯನ್ನು ಕೇಳುತ್ತಾ ಒಂದೇ ಮನಸ್ಸಿನಲ್ಲಿ ಎಲ್ಲರೂ ಕಡೆಯಬೇಕೆಂದು ಪೇಳುತ್ತಾ, ಪೇರ್ವಾಸಿಗಳನ್ನುಡಿಯುತ್ತಾ, ಪಂಥಂಗಳಾಡುತ್ತಾ ಕಡೆಯುತ್ತಿರಲೂ ಕಾಚೋರ್ಗೆಯು ಕಾಣಿಸಿತು.

(ತೋಹರಾ)

ಪಾಲಕಡಲನತಿ ಲೀಲೆಯಿಂದಲುರು ಶೈಲದಿ ಕಡೆಯುತ್ತಿರಲು ।
ಕಾಲಕೂಟಪುಟ್ಟುತಮೇಲಕೆ ವಿಷಜ್ವಾಲೆಗಳು ಗುಳುತಬರಲು ॥

॥ ವಚನ ॥

ಈರೀತಿಯಾಗಿ ಸಮುದ್ರಮಧ್ಯದಲ್ಲಿ ಕಾಲಕೂಟವೆಂಬ ವಿಷಜ್ವಾಲೆಗಳನ್ನುಗುಳುತ್ತಾ ಫಾಲಾಕ್ಷನನೇತ್ರಾಗ್ನಿ ಗಿಮ್ಮಿಗಿಲಾಗಿ ಪ್ರಳಯಾಗ್ನಿ ಗಳನೇಕವು ಒಂದಾಗಿ ಸೇರಿಬಂದಿರುವಂತೆ ಅಯುತರವಿಪ್ರಕಾಶದಿಂದ ದೃಷ್ಟಿಸಲಸಾಧ್ಯವಾಗಿ ಪುಟ್ಟಿದಂಥಾದ್ದಾಯಿತು. ಆಕಾಲದಲ್ಲಿ

(ತೋಹರಾ)

ಮಿಗೆಭುಗಿಭುಗಿಸುತದಿಗಿಲುಗೊಳಿಸಿ । ಕಾರ್ಬೊಗೆಯಂಬರತುಂಬಿಸಿತು
ಖಗಮೃಗತತಿಗಳ ಧಗಧಗನುರಿಸುತ । ಜಗವೆಲ್ಲವು ವ್ಯಾಪಿಸಿತು॥

॥ ವಚನ ॥

ಭುಗಿಲ್ ಭುಗಿಲೆಂಬ ಪೊಗೆಗಳಿಂದಲೂ ಛಟಛ್ಛಟಾಯಮಾನವಾದ ಅಗ್ನಿಕಣಗಳಿಂದಲೂ ಧಗದ್ಧಗಾಯಮಾನವಾದ ಅಗ್ನಿ ಜ್ವಾಲೆಗಳಿಂದಲೂ ಹಬ್ಬಿಕೊಂಡು ದಿಕ್ಕುಗಳೆಲ್ಲವಂತುಂಬಿ ಗಹನಂಗಳಂದಹಿಸುತ್ತಾ ಲೋಕಂಗಳೆಲ್ಲವಂ ವ್ಯಾಪಿಸುತ್ತಾಬರಲು ಆ ವಿಷಜ್ವಾಲೆಗೆ ನಿರ್ಜರರು ನೀರಾದರು. ರಕ್ಕಸರು ಭೂಮಿಗೆ ಬಿದ್ದರು. ಕಿನ್ನರ ಸಿದ್ಧ ಸಾಧ್ಯರೆಲ್ಲ ಚಿಂತಾಕ್ರಾಂತರಾದರು. ಪರ್ವತಂಗಳು ಒಡೆದು ಪುಡಿಪುಡಿಯಾಗುತ್ತಿದ್ದವು ಅನೇಕಪ್ರಾಣಿಗಳು ಭಸ್ಮವಾದಂಥಾದ್ದಾತು ಆಗ

(ಮಟ್ಟು)

ಇಂದಿಗೆ ಪ್ರಳಯವಾಯ್ತೆಂದು । ಲೋಕಂಗಳ ಜನಗಳುನೊಂದು। ಬ್ರಹ್ಮಾದಿಗಳೊಡನೈತಂದು । ಕೈಲಾಸವಾಸಪರ್ವತಕೆಬಂದು ಪರಮೇಶ್ವರನಿಗೆ ಬಲವಂದು । ಸಾಷ್ಟಾಂಗ ವೆರಗಿತಾವ್‌ಮುಂದು।ಕೈಗಳಜೋಡಿಸುತಲಿನಿಂದು ಕಡಲೊಳುವಿಷಪುಟ್ಟುತಬಂದು । ಬಹುಜೀವಂಗಳನುಕೊಂದು । ಲೋಕಂಗಳ ದಹಿಸುವೆನೆಂದು । ಧಗಧಗಿಪುದು ವ್ಯಾಪಿಸುತಿಂದು । ನೀಕಾಣದ ಬಗೆಯಲ್ಲೊಂದು । ಸಂರಕ್ಷಿಸು ಕರುಣಾಸಿಂಧು । ನೀನೆಂದು ಪ್ರಾರ್ಥಿಸಿದರಂದು ॥

॥ ವಚನ ॥

ಅನೇಕ ಜನರು "ಓಹೋ, ಇದೇನು ! ಪ್ರಳಯಕಾಲ ಪ್ರಾಪ್ತವಾಗಿದೆಯಲ್ಲಾ," ಎಂದು ಭಯಪಟ್ಟು ಬ್ರಹ್ಮನಿಗೆ ಮೊರೆಯಿಟ್ಟು ಅವನೊಡನೆ ಪೊರಮಟ್ಟು, ಕೈಲಾಸಪರ್ವತಕ್ಕೆ ಬಂದು ಪರಮೇಶ್ವರನಿಗೆ ಪ್ರದಕ್ಷಿಣೆ ನಮಸ್ಕಾರಗಳಂ ಮಾಡಿ, ಸ್ವಾಮಿ, ನೀನು ಕಾಣದ ಬಗೆ ಯಾವುದು,? ಸಮುದ್ರದಲ್ಲಿ ವಿಷ ಪುಟ್ಟಿ ಲೋಕವನ್ನು ದಹಿಸುತ್ತಿರುವುದು. ಕರುಣದಿಂದ ಕಾಪಾಡಬೇಕು ಎಂದು ಕೇಳಿಕೊಳ್ಳುತ್ತಿರುವವರನ್ನು ನೋಡಿ,

॥ ಕಂದ ॥

ಕೇಳುತ ಲೋಕದ ದುಃಖವ । ಫಾಲಾಕ್ಷನು ಕರುಣದಿಂದ ಹಾಲಾಹಲವಂ ॥ ಮೇಲಾದ ಜಂಬುಫಲದೊಲ್ । ಲೀಲೆಯೊಳುಂಡನು ಸಮಸ್ತ ಲೋಕವು ಪೊಗಳಲ್ ॥

ಬ್ರಹ್ಮದಕ್ಷಾಶ್ವಿದೇವೇಶ ಭರದ್ವಾಜ ಪುನರ್ವಸು ಹುತಾಶವೇಶ ಚರಕ ಪ್ರಭೃತಿಭ್ಯೋನಮೋನಮಃ

॥ ವಚನ ॥

ಈರೀತಿಯಾಗಿ ಪರಮೇಶ್ವರನು ಲೋಕದವರ ದುಃಖವಂ ಕೇಳಿ, ಕನಿಕರದಿಂದ ಬೆದರದಿರಿರೆಂದು ಸಂತೈಸಿ, ನಡೆತಂದು ವಿಷವಂ ಕಂಡು ಎಲೋ ಜಗದ್ರೋಹಿಯೇ, ಎಲ್ಲಿ ಹೋಗುತ್ತಿ ? ಇಲ್ಲಿಬಾರೆಂದು ಕರೆದು ಆ ವಿಷವನ್ನೆಲ್ಲವಂ ಕೈಯುಲ್ಲಿ ತೆಗೆದುಕೊಂಡು, ಕವಳಂಗೈದು ಜಂಬೂಫಲ ದಂತೆ ಪ್ರೀತಿಯಿಂದ ನುಂಗಿದಂಥವನಾದನು.

(ತೋಡಿರಾ)

ಉದರವು ಲೋಕಕೆ ಸದನವೆಂದರಿತು ಪದುಳದಿ ಕಂಠಪ್ರದೇಶಾ ।

ಕುದುರುಗೈದುತೆ ದ್ವಿಷವನು ನಿಲಿಸಿದ ಪದುಳದಿಂದ ಗಿರಿಜೇಶಾ ॥

॥ ವಚನ ॥

ಆ ಪರಮೇಶ್ವರನು ನುಂಗಿದಂಥಾ ವಿಷವು ಹೊಟ್ಟೆಯೊಳಕ್ಕೆ ಹೋದರೆ ಅನೇಕ ಪ್ರಾಣಿಗಳಿಗೆ ಸಂಕಟವಾದೀತೆಂದು ಯೋಚಿಸಿ ತದ್ವಿಷವನ್ನು ಕಂಠ ಪ್ರದೇಶದಲ್ಲಿಯೇ ನಿಲ್ಲಿಸಿದಂಥವನಾದನು ಶುಭ್ರವಾದ ಶ್ವೇತವರ್ಣ ದಿಂದೊಪ್ಪುತ್ತಿದ್ದ ಶಿವನ ಕಂಠವು ಕಪ್ಪಾದ ವಿಷವು ಸೇರಿದ್ದರಿಂದ ನೀಲಿಯ ಬಣ್ಣವಾದಂಥಾದ್ದಾಯಿತು. ಆದ್ದರಿಂದಲೇ ಆಶಂಕರನಿಗೆ ನೀಲಕಂಠ, ಗರಳ ಕಂಠ, ನಂಜುಂಡ ಎಂಬ ಹೆಸರುಗಳಾದಂಥಾದ್ದಾಯಿತು. ಈಶ್ವರನಿಂದ ದೇವದೈತ್ಯರು ಸುಖಪೊಂದಿ ಚೆದರಿದ್ದವರೆಲ್ಲರಂ ಸೇರಿಸಿ, ಪುನಃ ಶರಧಿಯಂ ಮುನ್ನಿನಂತೆಯೇ ಕಡೆಯುತ್ತಿದ್ದರು.

॥ ಕಂದ ॥

ಈರೀತಿ ಕಡೆಯುತಿರಲಾ । ಪಾರಾವಾರದೊಳು ಶ್ವೇತವರ್ಣಗಳಿಂದಂ । ರಾರಾಜಿಪ ಸುರಭಿಯು ಮೇಣ್ । ವಾರುವವುಂ ಜನಿಸಿತಾಗ ವೈಭವ ದಿಂದಂ ॥

||ವಚನ||

ಹೀಗೆ ಕಡೆಯುತ್ತಿರಲು ಆ ಸಮುದ್ರ ಮಧ್ಯದಲ್ಲಿ ಬಿಳುಪಾಗಿಯೂ, ಕೋರಿದ ಕೋರಿಕೆಗಳನ್ನು ಕೊಡುವಂಥಾದ್ದಾಗಿಯೂ, ಲಾವಣ್ಯದಿಂದೊಪ್ಪುತ್ತಿರುವ ಕಾಮಧೇನುವೆಂಬ ಗೋವು ಜನಿಸಿದಂಥಾದ್ದಾಯಿತು. ಮತ್ತು ಶುಭ್ರವಾದ ಕಾಂತಿಯುಳ್ಳ ಉಚ್ಚೈಶ್ರವವೆಂಬ ಕುದುರೆಯು ಪುಟ್ಟಿದಂಥಾದ್ದಾಯಿತು. ಆಗ,

(ಕೋಹರಾ)

ಸ್ವಚ್ಛವಾದ ಧೇನುವ ಮೌನೀಂದ್ರರು ಮೆಚ್ಚಿ ತೆಗದುಕೊಳಲಾಗಿ |
ಅಚ್ಯುತನಾಜ್ಞೆಯೊಳುಚ್ಚೈಶ್ರವ ಬಲಿಯಿಚ್ಛಿಸಿ ಪಿಡಿದನು ಬೇಗಾ ||

||ವಚನ||

ಆ ಶ್ರೇಷ್ಠವಾದ ಕಾಮಧೇನುವನ್ನು ದೇವರುಷಿಗಳು ಸಂತೋಷದಿಂದ ತೆಗೆದುಕೊಂಡವರಾದರು. ಉಚ್ಚೈಶ್ರವವೆಂಬ ಕುದುರೆಯನ್ನು ಇಷ್ಟದಿಂದ ಬಲಿಚಕ್ರವರ್ತಿಯು ಪಿಡಿದುಕೊಂಡಂಥಾವನಾದನು. ಇಂದ್ರನಿಗೂ ಆ ಕುದುರೆ ಮೇಲೆ ಇಷ್ಟವಿದ್ದಿತು. ಆದರೆ ಶ್ರೀಹರಿಯು ಆಜ್ಞೆ ಆಗಲಿಲ್ಲ.

|| ಮಟ್ಟು ||

ಸುತ್ತಾ ಪಾಲ್ ವಾರಿಧಿಯನು ಕಡೆಯುತ್ತಾ | ಲಿರುತಿರೆ ಶಶಿಕಾಂತಿಯ ಪೊತ್ತಾ | ಶುಭ್ರದಿ ಮೋಹವ ಬೀರುತ್ತಾ | ಚೌದಂತದಿ ಕಂಗೊಳಿಸುತ್ತಾ | ಐರಾವತವೆನ್ನುವ ಮತ್ತಾ | ದಂತಾವಳ ಉದ್ಭವಿಸುತ್ತಾ | ಲೈತರ ಲಿಂದ್ರನು ನೋಡುತ್ತಾ | ತನಗೊಪ್ಪುವದೆನುತಲಿ ಚಿತ್ತ | ದಲಿ ಯೋಚಿಸಿ ಹರಿಗರುಹುತ್ತಾ | ಕೈಕೊಂಡಹರುಷ ಪೊಂದುತ್ತಾ ||

|| ವಚನ ||

ಈರೀತಿಯಾಗಿ ನಾಲ್ಕು ಕೊಂಬುಗಳಿಂದಲೂ, ಧವಳವರ್ಣದಿಂದಲೂ ಉದ್ಭವಿಸಿದ ಐರಾವತವೆಂಬ ಆನೆಯನ್ನು ಹರಿಯ ಅಪ್ಪಣೆಯಂತೆ ಇಂದ್ರನು ತೆಗೆದುಕೊಂಡಂಥವನಾದನು. ಮತ್ತು,

||ಕಂದ||

ವಾರಿಧಿಯೊಳಿನ್ನು ಜನಿಸಿದ | ಕೋರಿದ ಕೋರಿಕೆಗಳೀವ ಕಲ್ಪದ್ರು

ಮವಂ | ವಿಾರಿದ ಸಂತೋಷದಿದ್ಕೆ | ತ್ಯಾರಿಗಳೇ ಕೊಂಡರಾಗ ಕೇಳ್ಕೆ ಭೂಪಾ ||

|| ವಚನ ||

ಆ ಸಮುದ್ರದಲ್ಲಿ ಪುನಃ ಪುಟ್ಟಿದ ಕಲ್ಪವೃಕ್ಷವನ್ನು ಹರಿಯಾಜ್ಞೆಯಿಂದ ದೇವತೆಗಳೇ ತೆಗೆದುಕೊಂಡಂಥಾವರಾದರು || ಅನಂತರ

(ತೊಹರಾ)

ತಿಂಗಳ ಪ್ರಭೆಬಾಲಾಂಗನೆಯರು ಮರಿಸಿಂಗದಪರಿಮಧ್ಯೆಯರು |
ಭೃಂಗಕುಂತಳೆಯರಪ್ಸರಸ್ತ್ರೀಯರುಸಂಗಡಲೇ ಜನಿಸಿದರೂ ||

||ವಚನ||

ಆ ಕಡಲಿನಲ್ಲಿ ಚಂದ್ರನಂತೆ ಮುಖವುಳ್ಳವರಾಗಿಯೂ ಎಂದಿಗೂ ಒಂದೇವಿಧವಾದ ರೂಪಲಾವಣ್ಯವೈಭವದಿಂದಿರುವಂಥಾವರಾಗಿಯೂ ವೊಪ್ಪಿಡಿನಡುವುಳ್ಳವರಾಗಿಯೂ ಇರುವ ಅಪ್ಸರಸ್ತ್ರೀಯರು ಜನಿಸಿ ದೇವಲೋಕಕ್ಕೈದಿದಂಥಾವರಾದರು. ಅನಂತರ ಆಕ್ಷೀರಸಮುದ್ರದಲ್ಲಿ ಚಂದ್ರನುದಿಸಿ ವಿರಿಂಚಿಯಾಜ್ಞೆಯಿಂದ ತನ್ನ ಮೂಲಸ್ಥಾನದಲ್ಲಿ ಯಿದ್ದಂಥಾವನಾದನು. ಅನಂತರದಲ್ಲಿ,

|| ಕಂದ |

ಮುಂಗಾರು ಮಿಂಚ ನೆಣಕಿಪ | ಶೃಂಗಾರದದೇಹಕಾಂತಿಸಂಪತ್ಕರವಂ | ಕಂಗಳೊಳೇನುವನೋಟದಿ | ಮಂಗಳದೇವತೆಯು ಕಡಲಮಧ್ಯದಿ ಬಂದಳ್ ||

|| ವಚನ ||

ಮುಂಗಾರು ಮಿಂಚನ್ನು ಜರೆಯುತ್ತಿರುವ ಶರೀರಕಾಂತಿಯಿಂದಲೂ ಕರುಣಾಕಟಾಕ್ಷದಿಂದ ಈಕ್ಷಿಸಿದ ಮಾತ್ರಕ್ಕೆ ಅವರನ್ನು ಅನೇಕ ಲಕ್ಷಾಧಿಪರನ್ನಾಗಿಗೈಯುವ ದೃಷ್ಟಿಯಿಂದಲೂ ಲೋಕಂಗಳಿಗೆ ಶುಭಂಗಳಂಪಾಲಿಸುವ ಮಂಗಳದೇವತೆಯಾದ ಶ್ರೀ ಮಹಾಲಕ್ಷ್ಮಿಯು ಪುಟ್ಟಿದಂಥಾವಳಾದಳು ಆ ಜಗಜ್ಜನನಿಯು ಪುಟ್ಟಿದಾಗಲೇ

||ಸೀಸಪದ್ಯ||

ಬಾಲೇಂದು ವದನೆಯಿಾಬ್ರಹ್ಮಾಂಡವೆಲ್ಲವು | ಬೊಂಬೆಗಳೆ ಮನೆಯೆಂದು ಭಾವಿಸುವಳೂ | ಮನದೊಳುಬ್ರಹ್ಮಾದಿಮುಖ್ಯರಾದವರಾಟಬೊಂ

ಬೆಗಳೆನ್ನುತ ಭಾವಿಸುವಳು । ಭುವನಂಗಳೆಲ್ಲಮುಂ ಪೊಂಕದಿಂಪೇರಿಸಿದ ಭಾಂಡಗಳೆನ್ನುತ ಭಾವಿಸುವಳು । ಕುಂಭಿಣೀಚಕ್ರವನು ಕುಶಲದಿಂದೀಕ್ಷಿಸಿ ಬೊಂಬೆಪೀಠವಿದೆಂದು ಭಾವಿಸುವಳು । ಚಂದ್ರಸೂರ್ಯರಪ್ರಥ್ಥಳಿ ಶಾಲೆಗಿದುವೆ । ಜ್ಯೋತಿಬೆಳಕುಗಳೆನ್ನುತ ಯೋಚಿಸುವಳು । ಕಾಣುತಾಗ ಸರಸ್ವತೀಗೌರಿಯುರನು । ಆತ್ಮಸಖಿಯರು ತನಗೆಂದು ಆದರಿಪಳು ॥

॥ವಚನ॥

ಇಂತು ಲಕ್ಷ್ಮೀದೇವಿಯು ಪುಟ್ಟಿದಾಗಲೇ ಬ್ರಹ್ಮಾಂಡವೆಲ್ಲವೂ ತನ್ನ ಬೊಂಬೆಗಳ ಮನೆಯೆಂದುನ್ನು ಬ್ರಹ್ಮನೇ ಮೊದಲಾದವರು ಬೊಂಬೆಗಳೆಂಬದಾಗಿಯೂ ಹದಿನಾಲ್ಕು ಲೋಕಗಳು ಅಡಕಿರುವ ಪಾತ್ರೆಗಳೆಂಬದಾಗಿಯೂ ಭೂಮಂಡಲವು ಬೊಂಬೆಗಳ ಮಣೆಯೆಂಬದಾಗಿಯೂ ಸೂರ್ಯಚಂದ್ರರು ದೀಪಗಳೆಂಬದಾಗಿಯೂ ಎಣಿಸಿ ಸರಸ್ವತೀ ಗೌರೀದೇವಿಯರನ್ನು ತನ್ನ ಸಖಿಯರೆಂದುಭಾವಿಸಿ ಆದರಿಸಿದಂಥಾವಳಾದಳು. ಇಂತಿರ್ಪ ಕ್ಷೀರಾಬ್ಧಿ ಸುಕುಮಾರಿಯಾದ ಶ್ರೀ ಲಕ್ಷ್ಮೀದೇವಿಯನ್ನು ನೋಡಿ ಬ್ರಹ್ಮಾದಿಗಳು ಸಂತೋಷದಿಂದ ನಮಸ್ಕರಿಸಿ

(ರಾಗ—ಕುಚೇಲುನಿಚರಿತ್ರಂಯೆಂಬಂತೆ)

ಶ್ರೀ ತರುಣೀಮಣಿಗೆ ॥ಪ॥ ಸಂಪ್ರೀತಿಯಿಂದಲುಪಚರಿಸಿದರುವಿಗೆ ॥ ॥ಅ॥ ಶರಧಿಪನಿತ್ತನು ವರಪೀತಾಂಬರ । ವರುಣನಿತ್ತಶುಭವೈಜಯಂತಿಯನು ॥೧॥ ಚಂದದಿಕಡಗಕಾಲಂದುಗೆನೂಪುರ । ತಂದು ವಿಶ್ವಕರ್ಮ । ವಂದಿಸಿ ಕೊಟ್ಟನು ॥೨॥ ನೀರಜಾಸನಕೈಗೆ । ವಾರಿಜವಿತ್ತನು ಭಾರತಿಕೊಟ್ಟಳು ತಾರಹಾರವನು ॥೩॥ ಪನ್ನಗಸರಿತ್ತರು । ಕರ್ಣಾಭರಣ । ಸನ್ನುತಿಗೈದವು । ಶ್ರುತಿಗಳುವರ್ಣಿಸಿ ॥೪॥ ಸುರತರುಣಿಯರತಿ । ಹರುಷದಿಪಾಡುತಾ ॥ ಭರದೊಳೆರೆದು ಶೃಂಗರಿಸಿದರಾಗಳೆ ॥

॥ವಚನ॥

ಇಂತು ಸಕಲೋಪಚಾರಂಗಳಂ ಪೊಂದಿ ಶ್ರೀಕಾಂತೆ ನಿಂತಿರಲು.

(ತೊಹರಾ)

ಶ್ರೀಲಲನಾಮಣಿಯನು ಪೊಗಳಿದವೈ । ಭಾಳದಿಶೆಯುಕೂಗುತ್ತಾ ।
ಲೀಲೆಯಿಂದ ಹದಿನಾಲ್ಕು ಲೋಕಗಳ ಪಾಲಿಪನರಸಿಯೆನುತ್ತಾ ।

॥ವಚನ॥

ಇಂತು ನಿಂತಿರುವರಮಾಕಾಂತೆಯಂನೋಡಿ ಈ ದೇವತೆಯು ಈರೇಳುಲೋಕವನ್ನಾಳ್ವ ಭಗವಂತನ ರಾಣಿಯುಹುದೆಂದು ದಶದಿಕ್ಕುಗಳೂ ಪೊಗಳಿದಂಥಾದ್ದಾದವು. ಆಗ ಲಕ್ಷ್ಮಿದೇವಿಯು

॥ಕಂದ॥

ಸೇರಿಹರೊಳುತನಗೆಣೆಯುಹ । ರಾರಿಲ್ಲವೆನುತ್ತ ಮನದಿಯೋಚಿಸಿ ಹರಿಯಂ । ಶ್ರೀರಮೆನೋಡುತಮನದೊಳ । ಪಾರಾನಂದವನುತಾಳ್ದು ಮೋಹಿತಳಾದಳ್ ॥

॥ವಚನ॥

ಆ ಶ್ರೀಮಹಾಲಕ್ಷ್ಮಿಯೂ ಮತ್ತಾರೂ ತನಗೆ ಸರಿಯಾದವರದಲ್ಲವೆಂದು ನಿರಾಕರಿಸಿ ಶ್ರೀಹರಿಯುಂನೋಡಿ ಅಮಿತಸಂತೋಷವಂ ಪೊಂದಿ ತನಗ ಈತನೇ ವಲ್ಲಭನಾಗಿರುವುದು ಸರಿಯೆಂದು ಮೋಹಿಸಲು ಆಗ ಶ್ರೀಹರಿಯೂ ವಾರ್ಧಿಕುಮಾರಿಯುಂ ನೋಡಿ ತನಗೆ ಪ್ರಿಯಳಾಗಿರುವಳೆಂದು ಆಲೋಚಿಸಿ ದಂಥವನಾಗಿ ತಲೆಯೆತ್ತಿನೋಡಲು,

॥ ಕಂದ ॥

ಹರಿನೋಡಲು ಸಿರಿ ನೋಡಳು । ಸಿರಿನೋಡಲು ಹರಿಯು ನೋಡ ಸಿರಿಯುಂ ಹರಿಯುಂ ॥ ಶಿರವೆತ್ತಿನೋಡುತಿರಲಾ । ಸ್ಮರನಾಗಲೆಹರುಷ ದಿಂದ ಸಂರಂಭಿಸುವಂ ॥

॥ ವಚನ ॥

ಮುಂದು ಸಮುದ್ರರಾಯನು ತನ್ನಲ್ಲಿದ್ದ ಅಮೂಲ್ಯವಾದ ಕೌಸ್ತುಭ ವೆಂಬ ಬೆಲೆಯಿಲ್ಲದ ಮಣಿಯನ್ನು ಶ್ರೀಹರಿಗೆ ಸಮರ್ಪಿಸಿದ್ದ ಕಾರಣ ಶ್ರೀ ವತ್ಸಕೌಸ್ತುಭ ವೈಜಯಂತೀ ವನಮಾಲಿಕಾದಿ ಹಾರಹಾರಾಲಂಕೃತವಾದ ಶ್ರೀಹರಿಯ ವಿಶಾಲವಕ್ಷಸ್ಥಳವಂ ಲಕ್ಷ್ಮೀದೇವಿಯು ಈಕ್ಷಿಸಿದಂಥಾವಳಾಗಿ,

(ತೋಹರಾ)

ಶ್ರೀಸತಿಯೋಚಿಸಿ ಮನದೊಳು ತನಗೆ ನಿವಾಸಕೆ ಯೋಗ್ಯವಿದೆನುತಾ ।
ವಾಸುಕಿಶಯನನ ವಕ್ಷದಿನಿಂತಳು ಭಾಸುರಾಂಗಿ ಹರುಷಿಸುತಾ ॥

॥ ವಚನ ॥

ಇಂತು ಶ್ರೀಲಕ್ಷ್ಮೀದೇವಿಯು ಕಮಲಾಕ್ಷನಾದ ಶ್ರೀಹರಿಯ ವಕ್ಷಸ್ಥಳವಾದರೆ ತನಗೆ ವಾಸಕ್ಕೆ ಯೋಗ್ಯವಾಗಿರುವುದೆಂದು ಭಾವಿಸಲು ತಕ್ಷಣದಲ್ಲಿಯೇ ಪಕ್ಷಿಗಮನನಾದ ಶ್ರೀ ವಿಷ್ಣುವು ಅತ್ಯಂತ ಪ್ರೀತಿಯಿಂದ ಸಿರಿಯನ್ನು ತನ್ನ ಉರದಲ್ಲಿರಿಸಿಕೊಂಡಂಥವನಾದನು. ತದನಂತರ,

॥ ಕಂದ ॥

ವಾರಿಧಿಯನು ಕಡೆಯುತ್ತಿರೆ । ವಾರುಣಿಯೆಂದೆಂಬ ತರುಣಿಯುದಿಸಲು ದೈತ್ಯರ್ । ವಾರಿಜಲೋಚನನಾಜ್ಞೆಯೊ । ಳಾರಮಣಿಯ ಕೊಂಡರಾಗಲತಿಕೌತುಕದೊಳ್ ॥

॥ ವಚನ ॥

ಆ ಸಮುದ್ರದಲ್ಲಿ ವಾರುಣಿಯೆಂಬ ಒಬ್ಬ ಕನ್ಯೆಯುದಿಸಲು ಅವಳನ್ನು ಹರಿಯಾಜ್ಞೆಯಿಂದ ರಾಕ್ಷಸರು ತೆಗೆದುಕೊಂಡವರಾದರು. ಮತ್ತು ವಾರಿಧಿಯೊಳುದಿಸಿದ ತಾರೆ ಎಂಬ ಕನ್ಯೆಯನ್ನು ವಾಲಿ ಸುಗ್ರೀವರಿಗೆ ಕೊಟ್ಟಂಥವರಾದರು. ಅನಂತರ ಆ ಪಾಲು ಸಮುದ್ರದಲ್ಲಿ,

॥ ಧ್ಯಾನ ॥

ಸುಧಾಕುಂಭಂ ಹಸ್ತೇದಧದಮರತಾರ್ಥಂಸುಮನಸಾಂ । ಸಹಸ್ರಂ ಜಿಹ್ವಾಗ್ರೇ ಗದಹರಮಥರ್ವೋಪನಿಷದಂ । ಮಣಿಂಶ್ರೀವತ್ಸಾಂಗೇ ಹೃದಿಜಲನಿಧೇಯೋಜನಿಪುರಾ। ವಿನಿರ್ಘ್ನೆ ವಿಘ್ನಂವಃಸುಖಯುತಸಧನ್ವಂತರಿ ವಿಭುಃ॥

॥ ಮಟ್ಟು ॥ (ಜನನೀ ಜಾನಕೀ ಎಂಬಂತೆ)

ಪರಮಪುರುಷ ಗೋವಿಂದ । ಜನಿಸಿದ ಧನ್ವಂತರಿಯ ಅವತಾರದಿಂದ ॥ಪ॥ ನರಸುರಾಸುರ ಸಿದ್ಧಸಾಧ್ಯರು । ಗರುಡಪನ್ನಗ ಯಕ್ಷರೆಲ್ಲರು । ಬೆರಗುಗೊಳ್ಳುತ ನೋಡುತಿರೆ ಭಾ । ಸ್ಕರಪ್ರಕಾಶದಿ ಶರಧಿ ಮಧ್ಯದಿ ॥ಅ॥ ವೇದಂಗಳ ಮೂಲನು । ಹರಿಬಲನಾಯುರ್ವೇದಿ ಸದ್ಗುಣಶೀಲನೂ । ಆದಿಸದ್ಗುರು ಭೇದರಹಿತನು । ವಾದಿವಂದಿತ ವೈದ್ಯಪೂಜಿತ । ಸಾಧುದಾಯಕಕೆ ರ್‍ಪ್ರಧದೂರನ । ನಾದಿದೇವ ಮಹಾನುಭಾವನು ॥ ೧ ॥ ತರುಣ ಸುಂದರಮೂರ್ತಿಯೂ ವರಕಂಬುಕಂ । ಧರಪೀತಾಂಬರಧಾರಿಯೂ । ಮೆರೆಯುತಿಹ ಜಲಧರದಕಾಂತಿಯ । ಜರೆಯುತಿರುವ ಶರೀರಯುತನ । ಧ್ವರದಾ

ಘೋಕ್ತನು ಸುರುಚಿರಾಂಗನು । ಕರದೊಳಮೃತದ ಕಲಶಪಿಡಿದು ॥ ೨ ॥ ಲೀಲಾಮಾನುಷ ವೇಷನು । ಬೃಂದಾರಕ, ಜಾಲಮಾನಸತೋಷನು । ಪಾಲಿತಾಖಿಲಲೋಕನಧಿಕವಿ । ಶಾಲವಕ್ಷಸ್ಥಲನು ಶೋಭಿತ । ಮಾಲಿಕಾಧರ ನಮಿತಸುಂದರ । ಮೂಲವೈದ್ಯ ಕೃಪಾಲವಾಲನು ॥ ೪ ॥ ಶರದಾಶ್ವೀಜಾಸಿತ, ತ್ರಯೋದಶಿ । ಗುರುವಾರ ಶತಭಿಷೆಯುತಾ । ಬೆರೆದ ಶುಭದಿನದಲ್ಲಿ ಸುರರನು । ಪೊರೆದುಲೋಕದಿ ತನ್ನ ಸ್ಮರಿಪರ । ದುರಿತರೋಗಾದಿಗಳನೆಲ್ಲವ । ಪರಿಹರಿಸಿಪಾಲಿಸುವೆನೆನ್ನುತ ॥ ೪ ॥ ಕರಸುರಾಸುರ ಸ್ತೋತ್ರನು । ಅರುಣಾರುಣತಾ । ಮರಸಾಯುತನೇತ್ರನು । ಮಿರುಗುತಿಹ ನವರತ್ನಖಚಿತಾ । ಭರಣಭೂಷಿತ ಭಾಸುರೋಜ್ವಲ । ವರದಶರಣಾಗತರ ಪೊರೆಯುವ । ಬಿರುದು ಧರಿಸಿದ ಯೋಗನಗರೀ ॥ ೫ ॥

॥ ವಚನ ॥

ಈ ಪ್ರಕಾರವಾಗಿ ಧನ್ವಂತರಿಯು ಯೌವನಸ್ಥನಾಗಿಯೂ, ಅಜಾನುಬಾಹುಗಳುಳ್ಳವನಾಗಿಯೂ, ವಿಶಾಲವಕ್ಷಸ್ಥಲನಾಗಿಯೂ, ಶಂಖದಂತೆ ಕಂಠವುಳ್ಳವನಾಗಿಯೂ, ಪೀತಾಂಬರಧಾರಿಯಾಗಿಯೂ, ಉನ್ನತವಾದ ಉರಸ್ಥಳವುಳ್ಳವನಾಗಿಯೂ, ಮೇಘಶ್ಯಾಮಲವರ್ಣನಾಗಿಯೂ, ಮಣಿಕುಂಡಲವಿರಾಜಿತನಾಗಿಯೂ, ಶ್ರೀ ಮಹಾವಿಷ್ಣುವಿನ ಅಂಶದಿಂದ ಸಮುದ್ರದೊಳುದ್ಭವಿಸಿ ಅಮೃತಕಲಶವನ್ನು ಪಿಡಿದುಕೊಂಡು ಬಂದಂಥವನಾದನು, ದೇವತೆಯರಿಗೆ ಮಾತ್ರ ಅಮೃತಕೊಡುವುದು ಹೇಗೆ? ಈದೈತ್ಯರಲ್ಲಿ ತಪ್ಪುಕಾಣೆನಲ್ಲ! ಎಂದು ಯೋಚಿಸಿ.

(ತೊಹರಾ)

ಕರದಕಲಶವಲ್ಲಿರಿಸುತಧನ್ವಂತರಿ ಪೊರಟನು ತಾನೆಂದು ।
ಸ್ಮರಿಸುವಸುಜನರ ರೋಗಾದಿಗಳನು ಪರಿಹರಿಸುವೆನೆಂತೆಂದು ॥

॥ ವಚನ ॥

ಆಪರಮಪುರುಷನಾದ ಧನ್ವಂತರಿಯು ತನ್ನ ಕೈಯಲ್ಲಿದ್ದ ಕಲಶವನ್ನು ಅಲ್ಲಿರಿಸಿ ತೆಗೆದುಕೊಳ್ಳಿರೆಂದು ಪೇಳಿ ತನ್ನನ್ನು ಭಕ್ತಿಪೂರ್ವಕವಾಗಿ ಧ್ಯಾನಿಸುವಂಥಾವರ ಸಮಸ್ತ ರೋಗಾದಿಗಳನ್ನು ಪರಿಹರಿಸಿ ದೃಢಾಂಗರಾಗುವಂತೆ ಮಾಡುವೆನೆಂದು ಪೊರಟು ಅನೇಕ ಔಷಧಿಗಳನ್ನು ಕಲ್ಪಿಸಿ ಆಯುರ್ವೇದ

ವನ್ನು ಬೋಧಿಸುತ್ತಾ, ಅನೇಕ ಶಿಷ್ಯರನ್ನು ವೈದ್ಯದಲ್ಲಿ ಬುದ್ಧಿಶಾಲಿಗಳಾಗಿ ಮಾಡಿ ಭಕ್ತರನ್ನು ರೋಗಾದಿಗಳಿಂದ ಮುಕ್ತರನ್ನಾಗಿ ಗೈದಂಥಾವನಾದನು. ಅಲ್ಲಿರಿಸಿದ್ದ ಅಮೃತಕಲಶವನ್ನು ರಕ್ಕಸನೊರ್ವನು ಸಾವಿಲ್ಲದ ಔಷಧ ಸಿಕ್ಕಿತೆಂದು ಎತ್ತಿಕೊಳ್ಳಲು ಅದನ್ನು ಇನ್ನೊಬ್ಬದಾನವನು ಕಿತ್ತುಕೊಂಡಂಥಾವನಾದನು

॥ಕಂದ॥

ಒಬ್ಬನಕೈಕಲಶವ ಮ। ತ್ತೊಬ್ಬನುತಾಕಿತ್ತುಕೊಳ್ಳಲಿನ್ನೊಬ್ಬನುಬಂ॥
ದಬ್ಬರಿಸುತ್ತೊಯ್ಯಲದ।ನ್ನಿಬ್ಬರು ಕೊಂಡೊಯ್ದರಾಗನೃಪತೀಲಾವಾ॥

॥ವಚನ॥

ಈರೀತಿಯಾಗಿ ದೈತ್ಯರು ಒಬ್ಬನ ಕೈಯಲ್ಲಿದ್ದ ಅಮೃತಕಲಶವನ್ನು ಇನ್ನೊಬ್ಬನು ಕಿತ್ತುಕೊಳ್ಳುತ್ತಲೂ, ಮತ್ತೊಬ್ಬನು ಅವನ ಕೈಯಿಂದ ಕಿತ್ತುಕೊಳ್ಳುತ್ತಲೂ ಬಲಿಷ್ಠನಾದವನು ಆವನನ್ನು ಹೊಡೆದು ಕಿತ್ತುಕೊಳ್ಳುತ್ತಲೂ ಇಬ್ಬರೊಂದಾಗಿ ಅವನ ಕೈಯಿಂದ ಕಿತ್ತುಕೊಳ್ಳುತ್ತಲೂ ಇದ್ದರು. ಕೆಲವರು ಎಲ್ಲರೂ ಕಷ್ಟಪಟ್ಟಿರುತ್ತಾರೆ. ಎಲ್ಲರಿಗೂ ಬರಬೇಕಾದಮೃತವನ್ನು ನೀವು ಮಾತ್ರ ಅಪಹರಿಸುವುದು ಸರಿಯಲ್ಲವೆಂದು ಜಗಳವಾಡುತ್ತಲೂ ಇರುವಲ್ಲಿ ದೇವತೆಗಳು ಚಿಂತಾಕ್ರಾಂತರಾಗಿ

(ತೊಹರಾ)

ಚಿಂತೆಯಿಂದ ದೇವತೆಗಳು ಯೋಚಿಸುತೆಂತು ಗೈವುದಿದಕೆಂದು।
ಅಂತರಂಗದೊಳು ಧ್ಯಾನಿಸಿದರು ಶ್ರೀಕಾಂತನೆ ನೀಸಲಹೆಂದು॥

॥ಮತ್ತು॥

ಭಾಸುರಾಂಗ ಜಗದೀಶಾ। ಭಾಸ್ಕರಶತಕೋಟಿ ಪ್ರಕಾಶಾ। ನವಕೌಸ್ತುಭಮಣಿಮಯಭೂಷ। ಶರಣಾಗತಜನಸಂತೋಷ। ಸನ್ನುತಚಾರಿತ್ರವಿಶೇಷ। ಸದ್ಗುಣಮುನಿಹೃದಯವಿಕಾಸಾ। ನಿನ್ನಪ್ಪಣೆಯಂತೆ ಪ್ರಯಾಸ। ಪಟ್ಟೆವು ನಾವಮೃತವುಲೇಶಾ। ದೊರಕದೆಹೋಯಿತೊ ಲಕ್ಷ್ಮೀಶಾ। ನಿಶಾಚರರುಗೈದರುಮೋಸ। ನೀಕಾಯಬೇಕೋ ಸರ್ವೇಶಾ॥

ಹೇ ಸ್ವಾಮಿ ಬೇಗ ಬರಬೇಕು.

||ಕಂದ||

ಈಪರಿಯೊಳಮರರೆಲ್ಲರು | ಕಾಪಾಡುವುದೆಂದು ಸ್ತುತಿಸೆ ಕರುಣಾರಸದಿಂ | ಶ್ರೀಪತಿಯುಜಗನ್ಮೋಹಿನಿ | ರೂಪವಧರಿಸಿದನು ರಕ್ಕಸರು ಬೆರಗಾಗಲ್ ||



||ವಚನ||

ಅನಾಥರಕ್ಷಕನೂ ಆಪದ್ಬಾಂಧವನೂ ಶರಣಾಗತವತ್ಸಲನೂ ಆದ ದೇವನು ಸುರರಮೊರೆಯಂ ಕೇಳಿ ಕನಿಕರತಾಳಿ ರಕ್ಕಸರನ್ನು ವಂಚಿಸಲು ಯೋಚಿಸಿ ದೇವಮೋಹಿನಿಯು ತಕ್ಷಣ.

(ಮಾರಾಬಾಧೆಯನಾನುಯೆಂಬಂತೆ)

ನಾರೀರೂಪವನು | ವೈಯ್ಯಾರದಿಂಧರಿಸಿದ | ಸಾರಸದಳಲೋಚನ ||ಪ|| ಕ್ರೂರರಕ್ಕಸರೆದೆ | ನೀರಾಗಿ ಕಳವಳಿಸೆ | ಮೀರಿದತಿಲಾವಣ್ಯದಿಂದಲೆ | ಮೂರುಲೋಕವ ಮೋಹಗೊಳಿಸುವ ||ಅ|| ಚಾರುವೈಭವದಿ ಮುಂ | ಗಾರುಮಿಂಚನು ತಿರ | ಸ್ಕಾರವಾಳ್ವ ಶರೀರಕೆತಕ್ಕ | ಆರುಬೆಲೆಗಾಣದ | ಶೀರೆ ಕುಪ್ಪುಸಧರಿಸಿನಾರೆನೋಟವು | ಬೀರುತತಿಶ್ಯಂ | ಗಾರ ಸೊಬಗನು | ತೋರುತಾಕ್ಷಣ ||೧|| ಬಾಲಚಂದ್ರನ ಜರೆವ | ಫಾಲಭಾಗದೊಳು | ಲಾಲಿತಕುಂಕುಮಾ, ಲೀಲೆಯಿಂಧರಿಸಿ | ಮೇಲಾದಾಭರಣಸು | ಮಾಲ್ಯಗಂಧವ ಧರಿಸಿ | ಶೂಲಧರನಾದಾಗ್ಯೂ ಮೋಹದ ಜಾಲದೊಳಗುರುಳಿಸುವ ಸುಂದರ ||೨|| ಕಿರುನಗೆಯನುನಗುತ್ತ | ವಿರಸವನಾಡುತ್ತಾ | ಪರಮಹಂಸರ ಸಹಿತ | ಮರುಳುಗೈಯುತ್ತ | ಪರಿಶೆಗಳ್‌ಕಲ್ಪಿಸುತ | ಸರಸವನಾಡುತ್ತಾ | ನಿರಿಯಜಾರಿಸಿತ್ವರಿತಸೇರಿಸಿ | ಭರದಿನಾಚುತಬೆರಗುಮಾಡುತಾ || ೩ || ನಿಗನಿಗನೆ ಪೊಳೆವ ಕೆನ್ನೆಗಳಿಂದ | ತೊಂಡೆಪಣ್ಣುಗಳನು ತುಟಿಯುಸಂ | ಪಿಗೆಯನಾಸಿಕವ್ರೂ | ಮೃಗರಾಜನಣಕಿಪಮಧ್ಯದಿಂಮಿಸುನಿಯು || ಬುಗುರಿಯಂದದಸ್ತನಗಳಿಂದಲೆ ಜಗವನೇ ವಿರಹಾಬ್ಧಿಗದ್ದುವ||೪|| ನಾಗನಂದದಜಡೆಪು| ನ್ನಾಗನಂದದ ನಡೆಯು | ಮೇಘಗಂಭೀರದ | ಮೃದುವಾದನುಡಿಯೂ | ಸೋಗೆಗಂಗಳ ಹೊಳಪು ಬಾಗಿರ್ಪಭೂಚಲುವು | ಹ್ಯಾಗುವರ್ಣಿಸಲಾಗದೆನ್ನಲು ಯೋಗನಗರಿಯ ಭೋಗಿಕಯನನು ||೫||

||ವಚನ||

ಈರೀತಿಯಾಗಿ ಶ್ರೀಹರಿಯು ಅತ್ಯಂತ ಸೌಂದರ್ಯದಿಂದ ಜಗನ್ಮೋಹಿನೀ

ರೂಪವನ್ನು ಧರಿಸಿ ಮಂದಹಾಸವದನದಿಂದಲೂ, ಗಂಭೀರವಾದ ನಡೆಯಿಂದಲೂ, ಬರುತ್ತಿರುವ ವೈಯಾರವನ್ನು ದೈತ್ಯರು ನೋಡಿ ವಿರಹಾಬ್ಧಿಯೊಳ್ ಮಿಂದು ಸಮೀಪಕ್ಕೈತಂದು ವಿಧೇಯರಾಗಿನಿಂದು

(ರಾಗ ಎಂದಿಗಾಹುದೋ ತಂದೆ ಯೆಂಬಂತೆ)

ನಾರೀಮಣಿಯೆ । ಯಾರೆನೀರೆ । ಬಾರೆವೈಯಾರೇ ॥ಪ॥ ಸಾರಸಾಯತಾಕ್ಷಿಯೆ ಕೃಪಾರಸಾಬ್ಧೀರೆ ॥ಅ॥ ನಿನ್ನಾಜ್ಞೆಯನು ಮೀರಲಾರೆ । ವಿನ್ನುಮನ್ನಿಸು । ಚನ್ನೆನಿನ್ನಸೇವೆಯೊಳೆಮ್ಮನ್ನು ನಿಲ್ಲಿಸು ॥೧॥ ಸನ್ನುತಾಂಗಿಸಾವ ದಿವಿಜರಣ್ಣತಮ್ಮಂದಿರೂ । ಮುನ್ನನಮ್ಮೊಡನೆ ಶರಧಿಯನ್ನು ಕಡೆದರೂ ॥೨॥ ಬಾಲಾಮಣೀನೀನೆಜಗಕೆ । ಮೂಲಕರ್ತಳು । ಪಾಲುಮಾಳ್ಪುದ । ಮೃತವೆಮಗೆಲೀಲೆಯಿಂದಲೂ ॥

॥ವಚನ॥

ಈರೀತಿಯಾಗಿ ರಕ್ಕಸರು ರಕ್ಕಸಾರಿಯು ಸ್ತ್ರೀರೂಪವನ್ನು ನೋಡಿ ಬೆಕ್ಕಸಬೆರಗಾಗಿ ಕಾಮಾತುರದಿಂದ ವಿಕಾರದ ಮಾತುಗಳನ್ನಾಡುತ್ತಾ, ಅಮೃತಕಲಶವನ್ನು ತಂದು ಕೈಗೆಕೊಟ್ಟು “ಹೇನಾರಿ, ವಾಕ್ಯಗಂಭೀರಿ, ಕಾಮನಕೈಕಠಾರಿ, ಅಣ್ಣತಮ್ಮಂದಿರಾದ ನಮಗೂ ಸುರರಿಗೂ ಈ ಅಮೃತವನ್ನು ಸರಿಯಾಗಿ ಹಂಚಿಕೊಡು. ನೀನು ಹೇಗೆ ಮಾಡಿದರೂ ಮಾಡು. ನಿನ್ನ ಮಾತಿಗೆ ಪ್ರತಿಯಾಡುವವರು ನಾವಲ್ಲ. ನಮ್ಮನೀದಯದಿಂದ ನೋಡು ಎಂದು ಬೇಡುತ್ತಿರುವವರೊಡನೆ ಶ್ರೀಹರಿಯು

(ತೊಹರಾ)

ಕಲಹವ ಮಾಡದೆ ಎರಡುಸಾಲಿನೊಳು ಕುಳಿತುಕೊಳ್ಳಿ ನೀವೆಂದು ।
ಸುಲಭದಿ ಹಂಚುವೆನೆನುತೈತಂದಳು ಕಲಶವ ಪಿಡಿಯುತಲಂದು ॥

॥ ವಚನ ॥

ಅಸುರರಂ ನೋಡಿ, ನೀವು ದೇವ ಜ್ಯೇಷ್ಠರು, ಶ್ರೇಷ್ಠರು, ಬಹುಕಷ್ಟರು, ಅತ್ಯಂತ ನಿಷ್ಠರು, ನಿಮ್ಮ ಸಮ ಸುರರಾಗಲಾರರು, ವ್ಯಾಜ್ಯಗಳನ್ನಾಡದೆ ಬುದ್ಧಿವಂತರಾದ ನೀವು ಈ ಶುದ್ಧಿಯಾಗಿರುವ ಸ್ಥಳದಲ್ಲಿ ಕುಳಿತುಕೊಳ್ಳಿ, ಸುರರೆಲ್ಲರೂ ಆ ಸ್ಥಳದಲ್ಲಿ ಕುಳಿತುಕೊಳ್ಳಲಿ, ನಾನು ಮೇಲುಕೀಳಿಲ್ಲದೆ ಹಂಚುತ್ತೇನೆ, ಹಂಚುವಕಾಲದಲ್ಲಿ ಗಲಭೆ ಮಾಡಿದರೆ

ಅಮೃತವು ನೀರಾಗುವದು. ಹಂಚುವಳು ಹಾರಿಹೋಗುವಳು, ಸುಮ್ಮನೆ ಕುಳಿತುಕೊಳ್ಳಿರೆಂದಳು.

|| ಕಂದ ||

ಬಿನ್ನಣದಿ ಮಾತನಾಡುತ । ಕಣ್ಸೈಗೆಯೊಳಸುರರನ್ನು ಕುಣಿಸುತ ನಯದಿಂ । ಮನ್ನಿಸಿ ಮೋಹವಬೀರುತ । ಉಣ್ಣಿಸಿದಂದಯುದೊಳಮೃತ ದಿವಿಜರಿಗಾಗಳ್ ||

|| ವಚನ ||

ನಾರೀರೂಪವಂ ತಾಳ್ದ ವಾರಿಜಾಕ್ಷನು ಬಿನ್ನಾಣದ ಮಾತುಗಳನ್ನಾಡುತ್ತಾ ಎರಡು ಸಾಲಾಗಿ ಕುಳಿತಿರುವ ದೇವದೈತ್ಯರ ನಡುವೆ ಅಮೃತ ಕಲಶವಂ ಹಿಡಿದು ನಿಂತು (ಕಲಶದಲ್ಲಿ ಒಂದುಕಡೆ ಅಮೃತವೂ ಮತ್ತೊಂದುಕಡೆ ಮದ್ಯವೂ ಬೀಳುವಂತೆ ಮಾಡಿ) ಭಾವಚೇಷ್ಟೆಗಳನ್ನು ತೋರುತ್ತಾ, ಕಣ್ಸೈಗೆಯಿಂದಲೇ ಅಸುರರನ್ನು ಮೋಹಗೊಳಿಸುತ್ತಾ, ಹಾವ, ಭಾವ, ವೈದಮುಂತಾದ ಪರಿಸೆಗಳಿಂದ ಕೂಗುತ್ತಾ, ರಕ್ಕಸರಂ ನೋಡಿ, ನೀವೇ ಪೂರ್ವ ದೇವತೆಗಳೆಂದು ಹೇಳುತ್ತಾ, ಬೆರಗು ಮಾಡುತ್ತಾ, ಅಮೃತವನ್ನು ದೇವತೆಗಳಿಗೆರೆಯುತ್ತಾ, ಬೇಗ ಮಾಡಿರೆಂದು ಸೂಚಿಸುತ್ತಾ, (ರಕ್ಕಸರಿಗೆ ಮದ್ಯವಂ ಕುಡಿಸುತ್ತಾ) ಇರುವಲ್ಲಿ,

|| ಕಂದ ||

ಸುರರೊಳಗೊರ್ವಸುರನು ಕುಳಿ । ತಿರಲಮೃತವ ಕೊಡಲು ಕುಡಿಯೆ ಶಶಿರವಿಗಳದಂ || ಹರಿಗರುಹಲವನ ಶಿರವಂ । ತರಿದಾಗಳೆ ದೇವದೇವ ಕಣ್ಮರೆಯಾದಂ ||

|| ವಚನ ||

ಆ ದೇವತೆಗಳ ಪಙ್ಕ್ತಿಯಲ್ಲಿ ಒಬ್ಬ ರಕ್ಕಸನು ಕುಳಿತು ಅಮೃತವಂ ಕುಡಿಯಲು ಸೂರ್ಯ ಚಂದ್ರರು ಆ ಸಂಗತಿಯಂ ಶ್ರೀಹರಿಗೆ ವಿಜ್ಞಾಪಿಸಲು ಶ್ರೀಶನು ಚಕ್ರದಿಂದ ಆ ರಕ್ಕಸನ ಕಂಠವಂ ಛೇದಿಸಿ ಅಂತರ್ಧಾನವಂ ಪೊಂದಲು ಅಮೃತ ಕುಡಿದವನ ಕಂಠ ಮುಂಡಗಳೆರಡೂ ಪ್ರಾಣದಿಂದಿರಲು ಅವಕ್ಕೆ ಬ್ರಹ್ಮನು ರಾಹು ಕೇತುಗಳೆಂಬ ಹೆಸರಿಟ್ಟು ಗ್ರಹಗಳ ಗುಂಪಿಗೆ ಸೇರಿಸಿದಂತಾವನಾದನು, ಅನಂತರ,

(ಶೋಹರಾ)

ದಾನವರಾಗಲು ದಿವಿಜರಸಂಗಡ ನಾನಾವಿಧದಲಿ ಹೋರ್‍ಯಾಡಿ ।
ಕಾಣದೆ ಜಯವನು ಪಾತಾಳಕ್ಕೆ ಪ್ರಯಾಣಗೈದರೆಲ್ಲರುಗೂಡಿ ॥

॥ ವಚನ ॥

ಶ್ರೀಹರಿಯು ಅಂತರ್ಧಾನ ಹೊಂದಿದ ನಂತರ ರಕ್ಕಸರು ಗುಂಪು ಕೂಡಿ ತಮಗೆ ಮೋಸಮಾಡಿದರೆಂದು ಹೇಳಾಡಿ ದೇವತೆಗಳೊಡನೆ ಯುದ್ಧವಂ ಮಾಡಿ ಸೋತು ಪಾತಾಳಕ್ಕೆ ಪೋದಂಥವರಾದರು.

॥ ಕಂದ ॥

ಗಿರಿಯನು ಮೊದಲಿದ್ದೆಡೆಯೊಳ । ಗಿರಿಸುತ ವಾಸುಕಿಯ ಕಳುಹಿ ಶರಧಿಯಮೇಲಾ ॥ ಹರಿಯಾಡುತ್ತಿರೆ ಕಾಣುತ । ಸುರರತಿ ಹರುಷದೊಳು ನಮಿಸಿ ಪೂಜೆಯಗೈದರ್ ॥

॥ ವಚನ ॥

ಈ ರೀತಿಯಾಗಿ ರಕ್ಕಸರು ಪೋದ ನಂತರ ದೇವತೆಗಳು ಕ್ಷೀರಾಬ್ಧಿಯಲ್ಲಿ ನೋಡಲು, ಅಷ್ಟರಲ್ಲಿ ಶ್ರೀಮನ್ನಾರಾಯಣನು ಮಂದರ ಪರ್ವತವನ್ನು ಮೊದಲಿದ್ದ ಸ್ಥಳದಲ್ಲಿಯೇ ಇರಿಸಿ, ವಾಸುಕಿಯನ್ನು ಕಳುಹಿಸಿ, ಶರಧಿಯ ಮೇಲೆ ಲೀಲಾವಿನೋದದಿಂದ ತೇಲಾಡುತ್ತಿರುವ ಶ್ರೀಲೋಲನನ್ನು ಕಂಡು ನಮಸ್ಕಾರವಂ ಮಾಡಿ ವಿಶೇಷವಾಗಿ ಪೂಜಿಸಿದಂಥವರಾಗಲು ಮುನಿವರ್ಯರು ಕಾಮಧೇನುವಿನ ಕ್ಷೀರದಿಂದ ಪೂಜಿಸಿದಂಥವರಾಗಲು, ಶ್ರೀಹರಿಯು ದೇವತೆಗಳಿಗೆ ಅಭಯವಂ ಕೊಟ್ಟು ಅವರನ್ನು ಸ್ವರ್ಗಕ್ಕೆ ಕಳುಹಿ ತಾನು ವೈಕುಂಠವಂ ಸೇರಿದಂಥವನಾದನು.

ಬೃಂದಾರಕರು ಅದು ಮೊದಲು ಧನ್ವಂತರಿಯುದಿಸಿದ ದಿನವು ಧನತ್ರಯೋದಶಿ ಎಂದೂ ಕ್ಷೀರಾಬ್ಧಿಯಲ್ಲಿ ಶ್ರೀಹರಿಯಂ ಪೂಜೆಮಾಡಿದ ದಿನವನ್ನು (ಆಶ್ವೀಜ ಬ॥ ತ್ರಯೋದಶಿಯನ್ನು) ಕ್ಷೀರಾಬ್ಧಿ ದ್ವಾದಶಿಯೆಂದೂ ಶ್ರೀಹರಿಯು ವೈಕುಂಠಕ್ಕೆ ಗಮಿಸಿದ ಕಾರ್ತಿಕ ಶುದ್ಧ ಚತುರ್ದಶಿಯನ್ನು ವೈಕುಂಠ ಚತುರ್ದಶಿ ಎಂದೂ ಪ್ರತಿವರ್ಷವೂ ಆಯಾದಿನಗಳಲ್ಲಿ ಶ್ರೀಹರಿಯನ್ನು ಪೂಜಿಸುತ್ತಿರುವರು. ಭೂಸುರರೂ ಕೆಲವರು ಹಾಗೆಯೇ ಅನೇಕ ಉತ್ಸವಾದಿಗಳಿಂದಲೂ

ವ್ರತಗಳಿಂದಲೂ ಶ್ರೀಹರಿಯನ್ನು ಆಯಾಕಾಲದಲ್ಲಿ ಪೂಜಿಸುತ್ತಾ ಆಯುರಾರೋಗ್ಯ ಐಶ್ವರ್ಯಾಭಿವೃದ್ಧಿಯಿಂದ ಕಂಗೊಳಿಸುತ್ತಿರುವರು

ಶ್ಲೋಕ ॥ ವಿರಂಚಿಂ ಶಿವದಕ್ಷೌಚ । ಅಶ್ವಿನೀಂದ್ರಭಿಷಗ್ಗುರೂ ॥
ಧನ್ವಂತರಿಂ ಪ್ರಣಮ್ಯಾಹಂ । ವಕ್ಷ್ಯೇಹರಿಕಥಾಂಮುದಾ ॥

॥ ವಚನ ॥

ವೈದ್ಯರಾದವರು ಆ ಧನ್ವಂತರಿಯನ್ನು ಭಕ್ತಿಯಿಂದ ಧ್ಯಾನಿಸುತ್ತ ಔಷಧಗಳನ್ನು ಮಾಡಿಕೊಡುವರು. ಈಗ ಯಥಾರಾಜಾತಥಾಪ್ರಜಾಃ ಎಂಬ ಮುಂದಣ ರಾಯರಕಾಲದಲ್ಲ ಈ ವ್ರತಗಳನ್ನು ಆಚರಿಸುವವರು ಇಲ್ಲವಾಯಿತು. ಆದ್ದರಿಂದ ಈವ್ರತದ ಸಂಗತಿಯೇ ನಿನಗೆ ತಿಳಿಯದೆಹೋಯಿತು ಆದಕಾರಣವೇ ರೋಗಾದಿಗಳು ಪ್ರಬಲವಾಯಿತು.

(ತೊಹರಾ)

ಧರಣೀಶನೆನಾಂ ಪೇಳಿದೆ ನಿನಗೀಹರಿಕಥೆಯನು ಪ್ರೀತಿಯೊಳು ।
ಪರಮಸುಖದಿನೀಬಾಳ್ವುದು ಧನ್ವಂತರಿವ್ರತಗೈದು ಮುದದೊಳು॥

॥ವಚನ॥

ಅಯ್ಯಾ ಧನಗುಪ್ತರಾಯನೇ, ಈ ಸತ್ಪುಣ್ಯ ಚರಿತ್ರೆಯನ್ನು ಪೇಳಿದೆನು. ನೀನಿನ್ನು ಧನ್ವಂತರಿಯ ವ್ರತವನ್ನು ಮಾಡಿ ಸಕುಟುಂಬನಾಗಿ ಸುಖದಿಂದಿರುವಂಥಾವನಾಗು. ಎನಲು ಧನಗುಪ್ತನು ಸ್ವಾಮಿ ಮುನಿಕುಲ ಚಂದ್ರ.

(ತಾಳ—ರೂಪಕ)

ನಾನೆ ಧನ್ಯನು ಯಿಂದಿಗೆ ನಾನೇ ಮಾನ್ಯನು ॥ಪ॥ ದೀನಜನೋದ್ಧಾರನಾದ ಮೌನಿವರ್ಯ ನಿನ್ನದಯದಿ ॥ಅ॥ ಪರಮಪುಣ್ಯಾತ್ಮರನ್ನು । ದರುಶಿಸುವದೆ ಪೂರ್ವಪುಣ್ಯ । ವರಯತೀಂದ್ರ ನಾನು ನಿನ್ನ । ಚರಣಕಮಲ ಕಂಡ ಕಾರಣ ॥ ೧ ॥ ಪರಮಹಂಸ ಕರವಮುಗಿದೆ । ದುರಿತಕೂಪದಿಂ ತೊಲಗಿದ್ದ । ಹರಿಕಥಾಮೃತವ ಕೇಳಿದೆ । ಹರುಷಾಂಬುಧಿಯೊಳ್ ಮುಳುಗಿ ತೇಲಿದೆ ॥ ೨ ॥ ಇನ್ನೀಜನ್ಮ ಸಫಲಮಾದುದು । ಯೆನ್ನರೋಗವೆಲ್ಲ ಪೋದುದು ಮುನ್ನವ್ರತಮದೆಂತು ಮಾಳ್ಪುದು ಸನ್ನುತಾಂಗ ಯೆನಗೆ ದಯದಿ ಪೇಳ್ವುದು ॥ ೩ ॥

॥ ವಚನ ॥

ಮಹಾತ್ಮನಾದ ಮುನಿವರ್ಯನೇ, ತಮ್ಮ ದರ್ಶನವನ್ನು ಮಾಡಿದೆ. ನಾನು ಪವಿತ್ರನಾದೆ. ಸತ್ಪುಣ್ಯಕಥಾಮೃತವನ್ನು ಕೇಳಿದೆ. ಎನ್ನ ಪಾಪಂಗಳೆಲ್ಲ ಹೋಗಾಡಿದೆ. ಆರೋಗ್ಯಭಾಗ್ಯವಂ ಪೊಂದಿದೆ. ಆದರೆ ಆ ಧನ್ವಂತರಿದೇವನ ವ್ರತವನ್ನು ಯಾವಾಗ ಮಾಡಬೇಕು?

(ತೊಹರಾ)

ಮಂತ್ರವೇನು ಧನ್ವಂತರಿ ವ್ರತಕೆ ಯೆಂತುನಾನು ಪೂಜಿಪುದು ।
ಶಾಂತಸ್ವರೂಪನೆ ಚಿಂತೆಯತೊಲಗಿಸಿ ಸಂತಸದಿಂ ಪೇಳುವುದು ॥

॥ ವಚನ ॥

ಮುನಿಸಾರ್ವಭೌಮನೆ, ಆ ಮಹಾತ್ಮನಾದ ಧನ್ವಂತರಿಯ ವ್ರತವನ್ನು ಯಾವಕಾಲದಲ್ಲಿ ಯಾವ ಮಂತ್ರದಿಂದ ಯಾವರೀತಿಗೆ ಮಾಡಬೇಕೋ ದಯವಿಟ್ಟು ಪೇಳುವಂಥಾವರಾಗಬೇಕು ಎಂದು ಬೇಡಿಕೊಳ್ಳಲು ಮುನಿವರ್ಯನು,

(ಕರಿರೇ ಆತನ ನೀವು ಎಂಬಂತೆ)

ಕೇಳೈ ಭೂಪತಿಯೇ ನೀ ಕೇಳೈ ॥ ಪ ॥ ಕೇಳೈಸದ್ವ್ರತಗೈಯ । ಲೇಳನೆ ಮಾಸದೊಳ್ । ಕಾಳತ್ರಯೋದಶಿಯ । ಮೇಲಾದುದಿದಕೆ ನೀ ॥ಅ॥ ಅರುಣೋದಯದೊಳೆದ್ದು । ಹರಿಯನ್ನು ಧ್ಯಾನಿಸುತಾ । ಹರುಷದಿಂ ಸತ್ಕರ್ಮ । ಚರಿಪುದು ಶ್ರದ್ಧೆಯೊಳ್ ॥೧॥ ನಿಲಯವ ಪರಿಶುದ್ಧಿಗೊಳಿಸಿ । ಕದಳಿ ಮಾಂ । ದಳಿರಿಕ್ಷುಪುಷ್ಪಂಗಳೊಳು ಶೃಂಗರಿಪುದು ॥ ೨ ॥ ವರತೀರ್ಥಸ್ನಾನವ । ವಿರಚಿಸಿ ಮಡಿಯುಟ್ಟು । ಗುರುಮುಖದೊಳು ಧನ್ವಂ । ತರಿ ಮಂತ್ರ ಜಪಿಪುದು ॥ ೩ ॥ ಜಲಪೂರ್ಣವಾದಂಥ ಕಲಶ ಕೈಯೊಳುಪಿಡಿದು । ಸಲೆ ಪ್ರಾರ್ಥಿಸಿ ವ್ರತ ಕೈ । ಕೊಳಬೇಕು ಭಕ್ತಿಯೊಳು ॥ ೪ ॥ ವನಜಾಕ್ಷನೇ ವ್ರತ । ಘನಭಕ್ತಿಯೊಳು ಗೈವೆ । ಧನಜಯವಾರೋಗ್ಯ । ವೆನಗೀಯ್ಯ ಬೇಕೆಂದು ॥ ಕೇಳೈ॥

॥ ವೃಟ್ಟ ॥

ಕೇಳೈಯ್ಯ ಧರಣಿಪತಿಯಿಂದು । ಸದ್ವ್ರತಗೈಯಲು ಬೇಕೆಂದು । ಬೋಚಿಪೆಯಾದರೆ ಆರೊಂದು । ಮಾಸದಿ ಕೃಷ್ಣತ್ರಯೋದಶಿಯೊಂದು ।

ಮೇಲಾದುದಕೆ ನೀನಂದು । ಶ್ರೀಹರಿರೋಹರಿಯೆಂತೆಂದು । ಏಳಲುಬೇಕು ದಯಕೆ ಮುಂದು । ಸತ್ಕರ್ಮಾಚರಿಸುತ ಬಂದು । ಶುದ್ಧಿಯನುಗೊಳಿಸಿ ಗೃಹವಂದು । ವರತೀರ್ಥದೊಳಗೆ ನೀಮಿಂದು । ಮಡಿಯುಟ್ಟು ಗುರುವಿಗೆ ಬಲವಂದು । ವಂದಿಸುತವರಾಜ್ಞೆಯೊಳು ನಿಂದು । ಜಲಕಲಶವ ಪಿಡಿದೈತಂದು । ವನಜಾಕ್ಷನೆ ಸತ್ಕೃಪಾಸಿಂಧು । ವ್ರತವನುಭಕ್ತಿಯೊಳಾನಿಂದು । ಗೈವೆನು ಸಕುಟುಂಬಕೆಂದೆಂದು। ಆರೋಗ್ಯಕೊಡಲುಬೇಕೆಂದು । ಪ್ರಾರ್ಥಿಸಿ ಪೂಜಿಸು ನೀನೆಂದು । ಮುನಿನುಡಿದು ಪೇಳ್ದಮತೊಂದು ॥

॥ ವಚನ ॥

ಅಯ್ಯಾ ಧನಗುಪ್ತನೇ, ನೀನೀರೀತಿಯಾಗಿ ಶ್ರೀಹರಿಯಂ ಪ್ರಾರ್ಥಿಸಿ, ಕಲಶವಂ ತಂದು ದೇವಗೃಹದಲ್ಲಿರಿಸಿ ಷೋಡಶೋಪಚಾರಗಳಿಂದ ಪೂಜಿಸುತ್ತಾ ಧ್ಯಾನಿಸಿ,

॥ ಕಂದ ॥

ಹದಿಮೂರು ಗಂಟಿನಿಂದಲಿ । ವಿಧವಿಹಿತದಿ ಗೈದ ದೋರಕವ ಬಲಗೈಯೊಳ್ ॥ ಪದುಳದಿ ಬಂಧಿಸಿ ಬೇಡುತ । ಮುದದಿಂ ಸಂಕಲ್ಪ ಪೇಳಿ ಮಾಳ್ಪುದು ವ್ರತವಂ ॥

॥ವಚನ॥

ಎಲೈ ಭೂಪತಿಯೇ, ಹದಿಮೂರು ಗಂಟುಗಳಿಂದ ಶಾಸ್ತ್ರೋಕ್ತ ಪ್ರಕಾರವಾಗಿ ಮಾಡಿದ ದೋರಕವನ್ನು ಪೂಜಿಸಿ ಬಲಗೈಗೆ ಕಟ್ಟಿಕೊಂಡು

॥ ಶ್ಲೋಕ ॥

ಧನ್ವಂತರೇಮಹಾಭಾಗ ಜರಾರೋಗ ನಿವಾರಕ । ದೋರರೂಪೇಣಮಾಂ ಪಾಹಿಸಕುಟುಂಬಂದಯಾನಿಧೆ ॥ ಆಧಿವ್ಯಾಧಿಜರಾಮೃತ್ಯುಭಯಾದಸ್ಮಾದಹರ್ನಿಶಂ । ಪೀಡ್ಯಮಾನಂ ದೇವದೇವ ರಕ್ಷಮಾಂ ಶರಣಾಗತಂ ॥

॥ ವಚನ ॥

ಹೇ ಧನ್ವಂತರಿ ಸ್ವಾಮಿಯೇ, ನೀನು ದೋರಕ ರೂಪದಿಂದ ಸಕುಟುಂಬಿಯಾದ ನನ್ನನ್ನು ಸಕಲ ರೋಗಗಳಿಂದಲೂ, ಜರಾಮರಣಂಗಳಿಂದಲೂ, ಬಿಡುಗಡೆಯನ್ನು ಮಾಡಿ ಸಂರಕ್ಷಿಸೆಂದು ಬೇಡುತ್ತಾ ಅರ್ಘ್ಯವಂ ಕೊಟ್ಟು ನಿಂತ ಪೂಜೆಯಂ ಗುರ್ವಾಜ್ಞೆಯಂತೆ ನಡಿಸಿ,

॥ಸೀಸಪದ್ಯ॥

ಎರಡು ಸೇರಿನ ರವೆಗೆ ಎರಡು ಸೇರ್ಹಾಲನ್ನು ನಾಲ್ಕು ಸೇರಿನ

ತೂಕ ತುಪ್ಪವನ್ನು | ಆರುಸೇರ್ಸಕ್ಕರೆ ಹಾಕಿ ಪಕ್ವವಮಾಡಿ | ಪಚ್ಚಕರ್ಪೂರ ಬಾದಾಮಿ ದ್ರಾಕ್ಷಿ | ಕುಂಕುಮಕೇಸರಿ ಕಸ್ತೂರಿ ಏಲಕ್ಕಿ | ಕಾಯಿಪತ್ರೆ ಲವಂಗಗಳನು ಸ್ವಲ್ಪ | ಬೆರಸಿ ಕಳಗಿಳುಹಿ ದೇವರಿಗೆ ನೈವೇದ್ಯವಂ | ಗೈದನಂತರ ಬ್ರಾಹ್ಮಣೋತ್ತಮರಿಗೆ | ಅರ್ಧ ದಾನವಮಾಡಿ ಮಿಕ್ಕರ್ಧವನ್ನು | ನೀನು ಸತಿಪುತ್ರರೊಡನೆ ಭುಂಜಿಸಲುಬೇಕು | ಇಂತು ಭಕ್ತಿಯೊಳ್ನಡಿಸೆ ಧನ್ವಂತರೀಯು ನಿನ್ನ ಕೋರಿಕೆಯನ್ನೀವ ನಿಶ್ಚಯದೊಳು ||

|| ವಚನ ||

ಎರಡು ಶೇರು ಗೋಧೀರವೆಯನ್ನು ತಂದು ಅದಕ್ಕೆ ಎರಡು ಶೇರು ಹಾಲು, ನಾಲ್ಕು ಶೇರಿನ ತೂಕ ತುಪ್ಪ, ನಾಲ್ಕು ಶೇರು ತೂಕ ಸಕ್ಕರೆಯನ್ನು ಹಾಕಿ ಪಕ್ವವಂ ಮಾಡಿ ಪಚ್ಚಕರ್ಪೂರ, ಬಾದಾಮಿ, ದ್ರಾಕ್ಷಿ, ಕೇಸರಿ, ಕಸ್ತೂರಿ, ಏಲಕ್ಕಿ, ಜಾಕಾಯಿ, ಪತ್ರೆ, ಲವಂಗ ಮುಂತಾದುವನ್ನು ಬೆರಸಿ ಇಳುಹಿಕೊಂಡು ದೇವರಿಗೆ ನೈವೇದ್ಯವಂ ಮಾಡಿ ನಂತರ ಅದರಲ್ಲಿ ಅರ್ಧವನ್ನು ಶ್ರೇಷ್ಠರಾದ ಬ್ರಾಹ್ಮಣರಿಗೆ ದಾನವಂ ಮಾಡಿ ನಿಂತರ್ಧವನ್ನು ನೀನು ನಿನ್ನ ಸತಿ ನಿನ್ನ ಪುತ್ರರೂ ಸಹ ಭುಂಜಿಸಬೇಕು.

(ತೊಹರಾ)

ಇಂತು ಭಕ್ತಿಯೊಳು ವ್ರತವಮಾಡೆ ಶ್ರೀ ಕಾಂತನು ತಾನೈತಂದು |
ಸಂತಸದಿಂದಿಷ್ಟಾರ್ಥವನೀವನು ಚಿಂತೆಯತೊಲಗಿಸಿ ಮುಂದು ||

|| ವಚನ ||

ಅಯ್ಯಾ ಧನಗುಪ್ತನೆ, ಈ ರೀತಿಯಾಗಿ ಭಕ್ತಿಯಿಂದ ವ್ರತವನ್ನು ಮಾಡಿದ್ದೇ ಆದರೆ ಆ ಶ್ರೀಹರಿಯು ನಿನಗೆ ಪ್ರತ್ಯಕ್ಷವಾಗಿ ನಿನ್ನಿಷ್ಟಾರ್ಥಂಗಳಂ ಕೊಟ್ಟು ರಕ್ಷಿಸುವನು. ನೀನು ಈ ಸದ್ವ್ರತವನ್ನು ಮಾಡುವಂಥಾವನಾಗು ಎಂದು ಮೌನೀಂದ್ರನು ಹೇಳಲು ರಾಯನು ಆತನಿಗೆ ವಂದಿಸಿ,

|| ಕಂದ ||

ಮುನಿವರ್ಯನೆ ನಿನ್ನಾಜ್ಞೆಯೊ | ಳನುನಯದಿಂ ಭಕ್ತಿಯಿಂದ ಗೈವೆನು ವ್ರತವಂ || ಎನಗರುಹುತನೀನಾವ್ರತ | ವನುಮಾಡಿಸಿ ನನ್ನ ಪೊರೆದು ಕೀರ್ತಿಯ ಪಡೆಯೈ ||

|| ವಚನ ||

ಸ್ವಾಮಿ, ಭರದ್ವಾಜ ಮುನೀಶ್ವರನೆ, ನಿನಗಿಂತಲೂ ಶ್ರೇಷ್ಠರಾದ ಗುರುವಿಲ್ಲವಾದ್ದರಿಂದ ನೀವೇ ಎನ್ನಿಂದ ವ್ರತವಂ ಮಾಡಿಸಿ ಎನ್ನಿಷ್ಟಾರ್ಥ

ವನ್ನು ನೆರವೇರಿಸಿ ಕೀರ್ತಿಯಂ ಪೊಂದಬೇಕೆಂಬದಾಗಿ ಪ್ರಾರ್ಥಿಸುತ್ತೇನೆ. ಎನ್ನ ಮೊರೆಯನ್ನು ಲಾಲಿಸಬೇಕು ಎಂದು ಬಿನ್ನೈಸಲು ಶ್ರೀ ಭಾರದ್ವಾಜ ಮುನೀಶ್ವರನು ಚಿತ್ತಕ್ಕೆ ತಂದಂಥಾವನಾಗಿ,

(ತೊಹರಾ)

ಯತಿಪತಿ ಪೇಳುತ ವ್ರತವ ಮಾಡಿಸಿದ ನತುಲಿತ ಸತ್ಕೃಪೆಯಿಂದ ।
ಕ್ಷಿತಿಪತಿಮಾಡಿದ ಸದ್ಭಕ್ತಿಯೊಳಾವ್ರತವನು ಸನ್ಮುದದಿಂದ ॥

॥ ವಚನ ॥

ಅಗ ಭರದ್ವಾಜಮುನಿಯು ಶಾಸ್ತ್ರೋಕ್ತದಂತೆ ಸಂಕಲ್ಪ ಮುಂತಾದ ಷೋಡಶೋಪಚಾರಂಗಳಂ ತಪ್ಪದೆ ಪೂಜೆಯಂ ಮಾಡಿಸಲು ಧನಗುಪ್ತನು ಭಕ್ತಿಯಿಂದ ಪೂಜಿಸಿದಂಥವನಾದನು.

॥ ಕಡಕು ॥

ಪೂಜಿಸುವೆನು ದೇವಾ ಮಹಾನುಭಾವಾ ॥ಪ॥ ಮೂಜಗದೊಡೆಯನೆ ಮೋಕ್ಷದಾಯಕನೆ । ರಾಜಿತಶತರವಿ ತೇಜಮಹಾಪ್ರಭೋ ॥ಅ॥ ಧ್ಯಾನಿಸುವೆನು ಧನ್ವಂತರಿ ಸ್ವಾಮಿ । ಶ್ರೀನಿಧಿಯಾವಾಹನೆ ಸುಪ್ರೇಮಿ । ಆಸನವಿದೊ ಜಗದೀಶನೆ ಕೊಡುವೆ । ಭೂಸುರಗಾತ್ರನೆ ಪಾದ್ಯವರ್ಪಿಸುವೆ । ಒಡೆಯನೆ ಅರ್ಘ್ಯವ ಕೊಡುವೆನು ಮುದದಿ । ಕೊಡುವಾಚಮನವ ಕೊಳುಸಂತಸದಿ । ಸುರಭಿಕ್ಷೀರದೊಳು ಸ್ನಾನವಗೊಳಿಸುವೆ । ವರಪೀತಾಂಬರ ಹರುಷದೊಳುಡಿಸುವೆ । ಶೋಭಿಪಯಜ್ಞೋಪವೀತವಧರಿಸೈ । ಆಭರಣಗಳರ್ಪಿಪೆ ಸ್ವೀಕರಿಸೈ । ಶ್ರೀಪತಿಪೂಜಿಪೆ ಸುಮಪತ್ರಗಳೊಳು । ಧೂಪದೀಪವರ್ಪಿಪೆ ಸನ್ನಿಧಿಯೊಳು । ದೇವನೆ ನೈವೇದ್ಯವನೀಕೊಳ್ಳೈ । ಭಾವಜಪಿತತಾಂಬೂಲವ ಮೆಲ್ಲೈ । ವಿನುತಿಸಿಕೊಡುವೆ ಸುವರ್ಣಪುಷ್ಪವನು । ನಿನಗೆ ಬೆಳಗುವೆನು ನೀರಾಜನವನು । ಸಾಷ್ಟಾಂಗನಮಸ್ಕಾರವು ನಿನಗೆ । ಇಷ್ಟಾರ್ಥಂಗಳ ಕೊಡುನೀನೆನಗೆ ॥ ಪೂಜಿಸುವೆನುದೇವಾ ॥

॥ ವಚನ ॥

ಇಂತು ಧನಗುಪ್ತನು ದೇವದೇವನಾದ ಧನ್ವಂತರಿಯನ್ನು ಭಕ್ತಿಪೂರ್ವಕವಾಗಿ ಷೋಡಶೋಪಚಾರಗಳಿಂದ ಪೂಜಿಸಿ ಸಾಷ್ಟಾಂಗ ನಮಸ್ಕಾರವಂ ಮಾಡಿ,

॥ ಶ್ಲೋಕ ॥

ಧನ್ವಂತರೇ ನಮಸ್ತುಭ್ಯಂ । ನಮೋ ಬ್ರಹ್ಮಾಂಡನಾಯಕ । ಸುರಾ

ಸುರಾರಾಧಿತಾಂಘ್ರೀ । ನಮೋ ವೇದೈಕಗೋಚರ ॥ ೧ ॥ ಆಯುರ್ವೇದ ಸ್ವರೂಪಾಯ ನಮಸ್ತೇ ಜಗದಾತ್ಮನೇ । ಪ್ರಸನ್ನಂ ಪಾಹಿದೇವೇಶ । ಜಗದಾನಂದ ದಾಯಕ ॥ ೨ ॥ ದಯಾನಿಧೇ ಮಹಾದೇವ । ತ್ರಾಹಿಮಾಮಪರಾಧಿನಂ । ಜನ್ಮಮೃತ್ಯು ಜರಾರೋಗ್ಯೈಃ । ಪೀಡಿತಂ ಸಕುಟುಂಬಿನಂ ॥೩॥

॥ ವಚನ ॥

ಬ್ರಹ್ಮಾಂಡಕ್ಕೆ ಒಡೆಯನಾದಂಥ, ದೇವದಾನವರುಗಳಿಂದ ಪೂಜಿಸಲ್ಪಡುವ ಪಾದಪದ್ಮಗಳುಳ್ಳಂಥಾ, ವೇದಗೋಚರನಾದಂಥಾ, ಆಯುರ್ವೇದ ಸ್ವರೂಪನಾದಂಥಾ, ಜಗದಂತರ್ಯಾಮಿಯಾದಂಥಾ, ಸ್ಮರಣಮಾತ್ರದಿಂದಲೇ ಸಕಲ ಪಾಪಗಳನ್ನು ಪರಿಹರಿಸುವಂಥಾ, ಶ್ರೀಮಹಾಧನ್ವಂತರಿ ರೂಪನಾದಂಥಾ, ಶ್ರೀಮನ್ನಾರಾಯಣನೇ, ನೀನು ನನಗೆ ಪ್ರತ್ಯಕ್ಷನಾಗಿ ಬಂದು, ಜನ್ಮ ಮರಣ ಜರಾರೋಗಗಳಿಂದ ಪೀಡಿತನಾದ ಕುಟುಂಬಿಯಾದ ನನ್ನನ್ನು ರಕ್ಷಿಸು, ರಕ್ಷಿಸು, ಎಂಬದಾಗಿ ಸ್ತೋತ್ರವಂ ಮಾಡಲು ಭಗವಂತನು ಈ ಧನಗುಪ್ತನ ಭಕ್ತಿಗೆ ಮೆಚ್ಚಿದಂಥವನಾಗಿ ಪ್ರತ್ಯಕ್ಷವಾಗಿ,

(ರಾಗ—ಆದಿತಾಳ)

ಬಂದಾ । ದೇವರದೇವಾ । ಮಹಾನುಭಾವಾ ॥ಪ॥ ಸಿಂಧುಶಯನ ಮುಚುಕುಂದವರದಗೋ । ವಿಂದ ಸಚ್ಚಿದಾನಂದ ಪ್ರತ್ಯಕ್ಷದಿ ॥ಅ॥ ಸರಸಿಜಾಕ್ಷಶಂಖ । ಚಕ್ರಾಮೃತವನು ಧರಿಸಿ ವರಪ್ರದಕರವನುತೋರುತ ॥೧॥ ಕಾಂಚನಾಂಬರವಕಟಿಯೊಳುಬಂಧಿಸಿ । ಮಿಂಚಿನಂದದೊಳು । ಮೆರೆಯುತಹರುಷದಿ ॥೨॥ ಚಾರುತುಲಸಿ ಶ್ರೀ । ವತ್ಸಕೌಸ್ತುಭಕೇ । ಯೂರಹಾರಗಳುರಾರಾಜಿಸುತಿರೆ ॥೩॥ ಕುಂದರದನಕಾ । ಲಂದುಗೆನೂಪುರ । ಧಿಂಧಿಮಿಯೆನುತಿರೆ । ಮಂದಹಾಸದೊಳು ॥೪॥ ವಿನಯದಿಂದವ್ರತ । ವನುಮಾಡುತಲಿಹ । ಧನಗುಪ್ತನಮನ । ಘನಭಕ್ತಿಗೆಮೆಚ್ಚಿ ॥೫॥ (ಜೈಭಕ್ತವರದೇ ಜೈವಿಠಲೆ).

ಈರೀತಿಯಾಗಿ ಶರಣಾಗತವತ್ಸಲನಾದ ಶ್ರೀಮನ್ನಾರಾಯಣನು ಪ್ರತ್ಯಕ್ಷವಾಗಿಬಂದು.

(ತೊಹರಾ)

ಧರಣೀಶನೆ ನೀಗೈದವ್ರತಕೆ ನಾ ಹರುಷವ ಪೊಂದಿದೆನೀಗಾ ।
ವರವನು ಕೊಡಲಾನೈತಂದೆನು ಕೇಳುರುತರದಿಷ್ಟವ ಬೇಗಾ ।

॥ ವಚನ ॥

ಅಯ್ಯಾ ಧನಗುಪ್ತರಾಯನೇ, ನಿನ್ನ ಭಕ್ತಿಗೆ ನಾನು ಮೆಚ್ಚಿದೆ, ನಿನ್ನ ಕೋರಿಕೆಯನ್ನು ಕೊಡುವೆನು, ಕೇಳು, ಎನಲು ಧನಗುಪ್ತನು ಪ್ರದಕ್ಷಿಣ ನಮಸ್ಕಾರಂಗೈದು ಕೈಮುಗಿದು ನಿಂದು,

(ರಾಗ—ಕೈಮುಗಿವೆಮುರಾರಿಶೌರೀ ಎಂಬಂತೆ)

ಪರಿ ಪಾಲಿಸೆನ್ನನು ಶ್ರೀಶಾ ॥ ಪ ॥ ಕರುಣಾಲವಾಲನೆ ಜಗದೀಶಾ ॥ ॥ಅ॥ ಆಯುರ್ವೇದಿಯ ಸಾಧು । ದಾಯಕನೀಯೆನ್ನ । ಕಾಯುವೆದ್ಯೈಭವ ನಾಶಾ ॥ ೧ ॥ ಸಕುಟುಂಬವ್ರೂ ನಾನು । ನಿಖಿಲರೋಗಂಗಳೊಳ್ । ಶಕು ತಿಗುಂದಿಹೆವು ಸರ್ವೇಶಾ ॥ ೨ ॥ ಸನ್ನುತಾಂಗನೆ ಕೇ । ಳೆನ್ನನ್ನು ಕಾಯ್ವರ। ನಿನ್ನಾರಕಾಣೇ ಪರವಾಸಾ ॥ ೩ ॥ ದಾರಾಪುತ್ರರನಾ । ನಾರೋಗ್ಯದಿಂದಿ ರ್ಪ । ಕೋರಿಕೆ ವೈಕುಂಠವಾಸಾ ॥ ೪ ॥ ವಾಸುದೇವನೆ ನಿನ್ನ । ದಾಸಾದಾ ಸರಿಗೆ ಸಾ । ದಾಸನ್ಯೆ ಯೋಗಪುರೀಶಾ ॥ ೫ ॥

॥ ವಚನ ॥

ಹೇ ಸ್ವಾಮಿ, ಭಕ್ತವತ್ಸಲ, ಸಕಲವ್ಯಾಪಕನಾದ ನೀನು ಕಾಣದ್ದು ಯಾವದಿರ್ಪುದು? ಎನಗೆ ವರವನ್ನು ಕೊಡುವದಾದರೆ ಸಕುಟುಂಬದೊಂದಿಗೆ ಆರೋಗ್ಯದಿಂದಿರುವಂತೆ ಅನುಗ್ರಹಿಸಬೇಕು. ನೀನಲ್ಲದೆ ಇನ್ನೊರ್ವರೆನ್ನ ಪಾಲಿಸುವರಿಲ್ಲ, ರಕ್ಷಿಸು, ಸ್ವಾಮಿ ರಕ್ಷಿಸು, ಎನಲು ಶ್ರೀಹರಿಯು,

॥ ಕಂದ ॥

ಧಾರುಣಿಪ ನಿನಗೆ ನಿನ್ನಯ । ದಾರಾಪುತ್ರರ್ಗೆ ಕೊಟ್ಟೆನಾರೋಗ್ಯವ ಮ । ತ್ತಾರಾದರಿಂತು ಪೂಜಿಸೆ । ಕೋರಿಕೆಗಳನಿತ್ತು ಪೊರೆವೆ ಕುಶಲದೊಳೆಂದುಂ ॥

॥ ವಚನ ॥

ಅಯ್ಯಾ ಭೂಪಾಲನೆ, ನಿನಗೂ ನಿನ್ನ ಸತಿಪುತ್ರರಿಗೂ ಆರೋಗ್ಯವನ್ನು ಕೊಟ್ಟಿರುವೆನಲ್ಲದೆ, ನಿನ್ನ ಇಷ್ಟಾರ್ಥಂಗಳೆಲ್ಲವನ್ನೂ ಕೊಡುವೆನು. ಅಲ್ಲದೆ ನೀನು ಮಾಡಿದಂತೆ ಮುಂದೆ ಈ ವ್ರತವನ್ನು ಭಕ್ತಿಪೂರ್ವಕವಾಗಿ ಮಾಡುವಂಥವರಿಗೆ ಕೋರಿದಕೋರಿಕೆಗಳನ್ನು ಕೊಟ್ಟು ಕಾಪಾಡುವೆನು.

(ದೋಹರಾ)

ಇಂತುಪೇಳಿ ತಕ್ಷಣದೊಳು ಶ್ರೀಹರಿಯಂತರ್ಧಾನವನೈದಲ್ ।
ಸಂತಸದಿಂ ಮುನಿಪತಿ ನುಡಿದನು ಭೂಕಾಂತನೊಡನೆ ತಾನಾಗಳ್ ॥

॥ ವಚನ ॥

ಈ ರೀತಿಯಾಗಿ ಪೇಳಿ ಶ್ರೀಹರಿಯು ಅಂತರ್ಧಾನವಂ ಪೊಂದಿದ ನಂತರ ಭರದ್ವಾಜಮುನಿಯು ಅಯ್ಯಾ ಧನಗುಪ್ತರಾಯನೇ, ಶ್ರೀ ಮಹಾ ವಿಷ್ಣುವಿನ ಮಹಿಮೆಯನ್ನು ನೋಡಿದೆಯಾ? ನಿನ್ನಿಂದ ನನಗೂ ಆ ಪರಮ ಪುರುಷನ ದರ್ಶನವಾಯ್ತು, ನಿನ್ನ ಇಷ್ಟಾರ್ಥಂಗಳೂ ಸಫಲವಾಯ್ತು, ರೋಗಾದಿಗಳು ಕಳೆದುಹೋಯಿತು.

(ಮಟ್ಟು)

ಕೇಳೆನ್ನಮಾತು ಭೂಪಾಲ । ಮುಂದಿನ್ನು ನೀನು ಕಾಲ ಕಾಲ । ತಪ್ಪದೆ ಈ ವ್ರತವನು ಶೀಲ । ದಿಂದ ಮಾಡಲು ನತಜನಪಾಲ । ಪಾಲಿಸು ವನಿನ್ನನನುಗಾಲ । ಈ ವ್ರತನೀದೇಶವಿಶಾಲ । ಕರುಹಲು ಅಲ್ಲಿನ ಜನ ಜಾಲ । ಮಾಚರಿಪರೆಲ್ಲರಾಮೇಲಾ । ನಾಡಿನ ಜನರು ಶ್ರೀಲೋಲಾ । ರೋಗ ಗಳಿಲ್ಲದೆ ಸದಾಕಾಲ । ಪೊರೆಯುವ ನಿನಗದು ಅನುಕೂಲ ॥

॥ ವಚನ ॥

ಅಯ್ಯಾ ಮಹಿಪಾಲನೆ, ಈ ವ್ರತವನ್ನು ನೀನು ಪ್ರತಿವರ್ಷವೂ ಮಾಡುವುದಲ್ಲದೆ ನಿನ್ನ ದೇಶದವರಿಂದಲೂ ಮಾಡಿಸುವಂಥಾವನಾಗು, ಹಾಗೆ ಮಾಡಿದರೆ ನಿನ್ನ ದೇಶದವರಿಗೆಲ್ಲಾ ಆಯುರಾರೋಗ್ಯ ಐಶ್ವರ್ಯಾಭಿವೃದ್ಧಿ ಯುಂಟಾಗುವುದು. ನಿನಗೆ ಮೇಲುಂಟಾಗುವದು.

(ತೊಡರಾ)

ಎಂದುಪೇಳಿ ಪೊರಡಿರಿನೀವೆನುತ್ಯೆಂದನು ಮುನಿಯಾಶ್ರಮಕೆ ।
ವಂದಿಸಿ ಸಕುಟುಂಬದಿಂದ ಕೂಡಿ ನೃಪ ಬಂದ ತನ್ನ ಪಟ್ಟಣಕೆ ॥

॥ವಚನ॥

ಇಂತು ಭರದ್ವಾಜಮುನಿಯು ವಂದಿಸಿ ನಿಂದಿರುವ ಧನಗುಪ್ತನಿಗೆ ಆಶೀರ್ವಾದವಂ ಮಾಡಿ ಕಳುಹಿ, ತಾನು ತನ್ನಾಶ್ರಮಕ್ಕೆ ಪೋದಂಥವನಾದನು. ಧನಗುಪ್ತನು ಸಕುಟುಂಬ ಸಮೇತನಾಗಿ ಸಂತೋಷದಿಂದ ಅವಂತೀಪುರಿಗೆ ಬಂದು ರಾಜ್ಯವನ್ನು ಪಾಲಿಸುತ್ತಾ,

॥ ಕಂದ ॥

ಮುನಿಪೇಳಿದಪರಿ ಸದ್ವ್ರತ । ವನು ಗೈಯುತ ಭೋಗಭಾಗ್ಯವನು ಭವಿಸುತಲಾ । ಧನಗುಪ್ತನಂತ್ಯಕಾಲದಿ । ವನಜಾಕ್ಷನಸ್ಮರಿಸಿ ಪರಮ ಪದವಿಯುಪಡೆದಂ ॥

॥ ವಚನ ॥

ಧನಗುಪ್ತರಾಯನು ಪ್ರತಿವರ್ಷವೂ ಧನ್ವಂತರಿಯ ವ್ರತವನ್ನು ಮಾಡುತ್ತಾ, ತನ್ನ ದೇಶದಲ್ಲಿ ಪ್ರಚುರಿಸಿ, ಭೋಗಭಾಗ್ಯಂಗಳನ್ನು ಅನುಭವಿಸುತ್ತಾ, ಸುಖದಿಂದಿರ್ದು ಮರಣಕಾಲದಲ್ಲಿ ಹರಿಸ್ಮರಣೆಯಂ ಮಾಡುತ್ತಾ, ಪರಮಪದವಿಯನ್ನು ಪಡೆದಂಥವನಾದನು. ಈಗಲೂ ಶ್ರದ್ಧಾಗರಿಷ್ಠರಾಗಿ,

॥ ಕಂದ ॥

ಭಕ್ತಿಯೊಳೀ ವ್ರತವನು ಶಾ । ಸ್ತ್ರೋಕ್ತದೊಳಾಚರಿಪರಿಗೆ ಸದಾರೋಗ್ಯವನುಂ ॥ ಭುಕ್ತಿಯ ಯುಕ್ತಿಯ ಶಕ್ತಿಯ । ಮುಕ್ತಿಯ ತಾ ಕೊಡುವ ಯೋಗಪುರಿಗಜವರದಂ ॥

॥ ವಚನ ॥

ಯಾರಾದರೂ ಭಕ್ತಿಪೂರ್ವಕವಾಗಿ ಶ್ರೀ ಧನ್ವಂತರಿ ವ್ರತಕಲ್ಪದಂತೆ ವ್ರತವನ್ನು ಮಾಡಿದ್ದೇ ಆದರೆ ಅವರಿಗೆ ಶ್ರೀಹರಿಯು ಸಕಲೈಶ್ವರ್ಯಂಗಳಂ ಕೊಟ್ಟು ಅಂತ್ಯದೊಳ್ ಸನ್ಮೋಕ್ಷವನ್ನು ಕೊಡುತ್ತಾನೆ. ವ್ರತಮಾಡಲು ಯತ್ನವಿಲ್ಲದಿದ್ದವರು,

(ತೊಹರಾ)

ಯಾರು ಓದಿದರು ಯಾರು ಕೇಳಿದರು ಯಾರು ಲಿಖಿಸಿದರು ಜಗದಿ ।
ಆರೋಗ್ಯೈಶ್ವರ್ಯಂಗಳನೀವನು ವಾರಿಜನಾಭನು ದಯದೀ ॥

॥ ವಚನ ॥

ಈ ಪುಣ್ಯಚರಿತ್ರೆಯನ್ನು ಯಾರು ಓದಿದಾಗ್ಯೂ ಅಥವಾ ಕೇಳಿದಾಗ್ಯೂ ಬರೆದಾಗ್ಯೂ ಅವರಿಗೆ ಶ್ರೀಮನ್ನಾರಾಯಣನು ಆಯುರಾರೋಗ್ಯೈಶ್ವರ್ಯವನ್ನು ಕೊಟ್ಟು ರಕ್ಷಿಸುವನು.

(ಸೈರಿಸು ಸೈರಿಸು ಎಂಬಂತೆ)

ಧ್ಯಾನಿಸುವೆನು ಧನ್ವಂತರಿ ದೇವಾ । ಭೂನುತಸಚ್ಚರಿತಾ ॥ ಪ ॥ ಮೌನೀಂದ್ರಾರ್ಚಿತ ದೀನಪಾಲ । ಸುಜ್ಞಾನಭರಿತನಿರುತ ॥ ಅ ॥ ಸುರರನು ಪೊರೆಯಲು ಶರಧಿಯಕಡೆಯುವ । ಪರಿಯನು ತಿಳುಹಿಸಿದೆ । ಹರುಷದಿ ಮಂದರಗಿರಿಗೆ ವಾಸುಕಿಯ । ಭರದೊಳು ಸುತ್ತಿಸಿದೇ ॥ ೧ ॥ ಸೇರಿಸುರಾಸುರರೊಳು ಕಡೆಯುವ ಪರಿ । ವಾರಕೆ ಬಲವಿತ್ತೆ । ನೀರೊಳು ಮುಳುಗಿದ ಗಿರಿಯನು ನೀನು ಕೂರುಮಾವತಾರದಿಂ ಪೊತ್ತೆ ॥ ೨ ॥ ಕರದೊಳಗಮೃತದ

ಕಲಶವಪಿಡಿಯುತ । ಶರಧಿಯಿನ್ನೈತಂದೆ । ಧರಣಿಯ ಮೋಹಿಪ ತರುಣಿಯ ರೂಪವ । ಧರಿಸುತನೀನಿಂದೆ ॥ ೩ ॥ ದುರುಳದಾನವರ ವಿರಹದಿ ಮುಳುಗಿಸಿ । ಮರುಳುಗೈದೆ ಮುದದಿ । ಸುರರಿಗಮೃತ ಕುಡಿಸುತ ಸ್ತ್ರೀರೂಪವ । ಮರೆಮಾಜಿದೆ ಕ್ಷಣದಿ ॥ ೪ ॥ ಅನೇಕ ರೂಪದೊಳನೇಕ । ನಾಮದೊಳನೇಕ ವಿಧವಿಧದೊಳ್ । ಅನೇಕ ಪೂಜೆಗಳನು ಮಾಡುತ್ತಿಹ । ರನೇಕ ಸುಜನರುಗಳ್ ॥ ೫ ॥ ಹಿಂದಣ ಧೊರೆಗಳ ಕಾಲದಿ ನಿನ್ನಾ । ನಂದದಿ ಧ್ಯಾನಿಸುತಾ । ಕುಂದುಕೊರತೆಗಳ ತ್ಯಜಿಸಿದ್ದರು ಸುಖ । ದಿಂಧರೆಪಾಲಿಸುತಾ ॥೬॥ ಮೋದದೊಳಾಂಗ್ಲೇಯರು ತಾವಾಯು । ವೇದವ ಪೊಗಳುವರು । ಗೋದಾವರಿ ಮೊದಲಾದ ದೇಶಿಗರಾ । ಹ್ಲಾದದಿ ಪ್ರಚಾರಿವರು ॥ ೭ ॥ ಧರೆಯೊಳು ಮೆರೆಯುವ ವರಕಲ್ಯಾಣ । ಪುರಿ ವಿ. ಡಿ. ಪಂಡಿತರೂ । ಸ್ಮರಿಸುತ ನಿಮ್ಮನು ಪರಿಪರಿ ರೋಗವ । ಪರಿಹರಗೈಯುವರು ॥ ೮ ॥ ಗರುಡಪುರಾಣದಿ ಪೇಳಹ ಚರಿತೆಯ । ಬರೆದಿಹೆನೀವಿಧದಿ । ದುರಿತದೋಷವೇನಿರಲಿದರೊಳು ನೀ । ಪರಿಹರಿಪುದು ದಯದಿ ॥ ೯ ॥

ಶ್ರೀ ಮಹಾಧನ್ವಂತರಿ ದೇವಾರ್ಪಣಮಸ್ತು.

(ರಾಗ—ಮಂಗಳಾರತಿ)

ಮಂಗಳ ಜಯಜಯ ಮಂಗಳಾ ॥ ಪ ॥ ಮಂಗಳಾತ್ಮಕ ಖಗತುರಂಗ ಶುಭಾಂಗಗೆ ॥ ಅ ॥ ಚಿಂತಿತದಾಯಕಗೆ । ಶಾಂತಸ್ವರೂಪಗೆ । ಅಂತರಾತ್ಮಕ ಶ್ರೀಧನ್ವಂತರಿಸ್ವಾಮಿಗೆ ॥೧॥ ಆದಿದೇವಗೆ ಪರ । ವಾದಿ ಭಂಜಕಗೆ । ಕ್ರೋಧರಹಿತನಾಯು । ರ್ವೇದ ಪ್ರಚಾರಗೆ ॥೨॥ ಹರುಷದಿಂದಮೃತವ । ಕರದಿ ಪಿಡಿದು ಪಾಲ್ । ಶರಧಿಮಧ್ಯದೊಳವ । ತರಿಸಿದದೇವಗೆ ॥೩॥ ವರಶಂಖಚಕ್ರವ । ಧರಿಸಿ ದುರ್ಜನರ ಸಂ । ಹರಿಸಿ ಸತ್ಪುರುಷರ । ಪೊರೆವ ಮಹಾತ್ಮಗೆ ॥೪॥ ನಾಗಗೋಚರ ಸಕ । ಲಾಗಮಪೂಜಿತ । ರೋಗರಹಿತ ಶ್ರೀ । ಯೋಗಪುರೀಶಗೆ ॥೫॥

॥ ಕಂದ ॥

ಹರಿಕರುಣದಿಂದ ಯೋಗನ । ಗರಿವರರದನಭಕ್ತ ಕೃಷ್ಣ ಹರಿಕಥೆಯಪೊಲೇ । ವಿರಚಿಸಿ ಧನ್ವಂತರಿ ಕಥೆ । ಹರಿಗೆ ಸಮರ್ಪಣೆಯಗೈದು ಹರುಷವ ತಾಳ್ದಂ ॥

॥



